ಸಾಹಿತ್ಯವಾಹಿನಿ_೪೯

# ಪಂಚರಾತ್ರ ಆಗಮಗಳು

ಜಿ. ಹನುಮಂತರಾವ್



ಪ್ರಕಾಶಕರು
ಡಿ. ವಿ. ಕೆ. ಮೂರ್ತಿ
ಕೃಷ್ಣಮೂರ್ತಿಪುರಂ : : ಮೈಸೂರು-೪

ಸಾಹಿತ್ಯವಾಹಿನಿ-೪೯

# ಪಂಚರಾತ್ರ ಆಗಮಗಳು

ಜಿ. ಹನುಮಂತರಾವ್, ಎಂ. ಎ.



ಪ್ರಕಾಶಕರು

ಡಿ. ವಿ. ಕೆ. ಮೂರ್ತಿ

ಕೃಷ್ಣಮೂರ್ತಿಪುರಂ : : ಮೈಸೂರು-೪

# ಪಂಚರಾತ್ರ ಆಗಮಗಳು

## ೧. ಪೀಠಿಕೆ

ಆಗಮ ಎಂದರೆ ಹಿಂದಿನಿಂದ ಬಂದ ಒಂದು ಸಂಪ್ರದಾಯ. ಈ ಸಂಪ್ರದಾಯಗಳು ವೇದದಿಂದ ಬೇರೆಯಾದುವು. ಅಂಥ ಅವೈದಿಕ ಸಂಪ್ರದಾಯಗಳು ನಾಲ್ಕು ಬಗೆಯಾಗಿವೆ—ವೈಷ್ಣವ, ಶೈವ, ಶಾಕ್ತ, ಮತ್ತು ತಂತ್ರ. ವೈಷ್ಣವ ಆಗಮಗಳು ಪಂಚರಾತ್ರ ಆಗಮಗಳೆಂದು ಪ್ರಸಿದ್ಧವಾಗಿವೆ. ಐದು ರಾತ್ರಿಗಳಲ್ಲಿ ಅನಂತ, ಗರುಡ, ವಿಷ್ವಕ್ಸೇನ, ಬ್ರಹ್ಮ ಮತ್ತು ರುದ್ರರು ಕೇಶವನಿಂದ ಈ ಶಾಸ್ತ್ರವನ್ನು ಕೇಳಿದ್ದರಿಂದ ಇದಕ್ಕೆ ಪಂಚರಾತ್ರವೆಂಬ ಹೆಸರು ಬಂದಿದೆ ಎಂದು ವಿಹಗೇಂದ್ರ ಸಂಹಿತೆ ತಿಳಿಸುತ್ತದೆ. ತತ್ತ್ವ, ಮುಕ್ತಿಪ್ರದ, ಭಕ್ತಿಪ್ರದ, ಯೌಗಿಕ ಮತ್ತು ವೈಶೇಷಿಕಗಳೆಂಬ ಐದು ವಿಧವಾದ ಜ್ಞಾನರಾತ್ರಗಳನ್ನು ತಿಳಿಸುವ ಶಾಸ್ತ್ರವಾದ್ದರಿಂದ ಇದಕ್ಕೆ ಪಂಚರಾತ್ರವೆಂಬ ಹೆಸರು ಬಂದಿತೆಂದು ನಾರದೀಯ ಸಂಹಿತೆ ತಿಳಿಸುತ್ತದೆ. ಬ್ರಾಹ್ಮಣಗಳಲ್ಲಿ ಹೇಳಿರುವ ಪಂಚರಾತ್ರ ಸೂತ್ರದಿಂದ ಈ ಹೆಸರು ಬಂದಿರಬಹುದೆಂದೂ ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚವೆಂಬ ಪುರುಷೋತ್ತಮನ ಐದು ರೂಪಗಳನ್ನು ತಿಳಿಸುವುದರಿಂದ ಈ ಶಾಸ್ತ್ರವನ್ನು ಪಂಚರಾತ್ರವೆಂದು ಕರೆದಿರಬಹುದೆಂದು ಡಾ. ಶ್ರೇಡರ್ ಅವರು ತಮ್ಮ ಪಂಚರಾತ್ರ ಮತ್ತು ಅಹಿರ್‌ಬುಧ್ನ್ಯ ಸಂಹಿತೆ ಎಂಬ ಗ್ರಂಥದ ಮುನ್ನುಡಿಯಲ್ಲಿ (ಪುಟ 25) ಹೇಳುತ್ತಾರೆ. ಪಂಚರಾತ್ರ ಆಗಮಗಳು ತುಂಬ ಪ್ರಾಚೀನವಾದುವು. ನಾರಾಯಣಋಷಿ ದರ್ಶಿಸಿದ ಋಗ್ವೇದದ

ಪುರುಷಸೂಕ್ತ ಈಚಿನ ವೈಷ್ಣವ ಮತಕ್ಕೆ ಆಧಾರವೆಂದು ಹೇಳುವು ದುಂಟು. ನಾರಾಯಣನು ಉಳಿದೆಲ್ಲವನ್ನೂ ಮೀರಿದ ಸ್ಥಿತಿಯನ್ನು ಮುಟ್ಟಲು ಪಂಚರಾತ್ರವೆಂಬ ಯಜ್ಞವನ್ನು ಮಾಡಿದನೆಂದೂ, ಆ ಮೂಲಕ ತನ್ನ ಇಷ್ಟಾರ್ಥವನ್ನು ಸಿದ್ಧಿಸಿಕೊಂಡನೆಂದೂ, ಶಥಪಥ ಬ್ರಾಹ್ಮಣ (xiii. 6.1) ತಿಳಿಸುತ್ತದೆ. ಮಹಾಭಾರತವು ನಾರಾಯಣನೇ ಉಳಿದೆಲ್ಲ ದೇವತೆಗಳಿಗಿಂತ ಹೆಚ್ಚಿನವನೆಂದೂ ಆ ನಾರಾಯಣನನ್ನು ಒಬ್ಬ ರಾಜ ಸಾತ್ವತ ವಿಧಾನದಿಂದ ಉಪಾಸಿ ಸಿದನೆಂದೂ ತಿಳಿಸುತ್ತದೆ. ಅದೇ ಪರ್ವದಲ್ಲಿ ವಾಸುದೇವನಿಂದ ಸಂಕರ್ಷಣ, ಸಂಕರ್ಷಣನಿಂದ ಪ್ರದ್ಯುಮ್ನ, ಪ್ರದ್ಯುಮ್ನನಿಂದ ಅನಿರುದ್ಧನೂ, ಅನಿರುದ್ಧನಿಂದ ಬ್ರಹ್ಮನೂ ಹುಟ್ಟಿದರೆಂದು ಹೇಳಿದೆ. ಪಂಚರಾತ್ರ ಆಗಮಕ್ಕೇ ವಿಶಿಷ್ಟವಾದ 'ವ್ಯೂಹ' ಭಾವನೆ ಇಲ್ಲಿ ಮೊಟ್ಟಮೊದಲಿಗೆ ಕಾಣಿಸಿಕೊಳ್ಳುತ್ತದೆ.

ಬಹುಶಃ ಈ ಸಾತ್ವತ ಸಂಪ್ರದಾಯದವರ ವೈದಿಕ ಜಾತಿ ಭೇದಗಳನ್ನು ಎಣಿಸದೆ ಎಲ್ಲ ಜಾತಿಯವರಿಗೂ ಪಂಚಮರಿಗೂ ಕೂಡ ಭಾಗವತ ಉಪಾಸನೆಗೆ ಅವಕಾಶ ಕೊಟ್ಟರೆಂದು ತೋರು ತ್ತದೆ. ವಿಗ್ರಹಗಳನ್ನು ರಚಿಸಲೂ, ದೇವಸ್ಥಾನಗಳನ್ನು ಕಟ್ಟಲೂ ಇವರು ಶೂದ್ರರನ್ನು ಆಶ್ರಯಿಸಿ ಅವರಿಗೂ ಭಗವಂತನ ಪೂಜೆಗೆ ಅವಕಾಶ ಕೊಟ್ಟರು. ಸಾತ್ವತ ಎಂಬ ಮಾತು ಅಂತಿಮ ಜಾತಿ ಸೂಚಕ ಪದ. ಸಾತ್ವತ ಮತ್ತು ಭಾಗವತ ಪರ್ಯಾಯ ಪದ ಗಳು. ಸಾತ್ವತರು ಪಂಚಮರೆಂದು ಮನು ತಿಳಿಸಿರುತ್ತಾನೆ. ಪಂಚರಾತ್ರರು ಬ್ರಾಹ್ಮಣರಂತೆ ಕಾಣಿಸಿದರೂ ಅವರ ಪಂಕ್ತಿಯಲ್ಲಿ ಕುಳಿತು ಶ್ರೋತ್ರೀಯರು ಊಟಮಾಡುತ್ತಿರಲಿಲ್ಲವೆಂದು ಹೇಳಿಕೆ ಗಳಿವೆ. ವಿಗ್ರಹಾರಾಧನೆಯನ್ನು ವೈದಿಕರು ದೂಷ್ಯವೆಂದು ಭಾವಿ

ಸಿದ್ದೂ ಉಂಟು. ಬಹುಶಃ ಮೊದಮೊದಲಲ್ಲಿ ಭಾಗವತ ಪಂಥದವರು ಅವೈದಿಕರೆಂಬ ಭಾವನೆ ಇತ್ತು. ಆದರೆ ಈ ಭಾವನೆ ಕಾಲಕ್ರಮದಲ್ಲಿ ಕಡಮೆಯಾಗಿ ಭಾಗವತರು ಶ್ರೇಷ್ಠರೆಂಬ ಭಾವನೆ ಬೆಳೆಯಿತು.

ಯಾಮುನಾಚಾರ್ಯರು ತಮ್ಮ ಆಗಮಪ್ರಾಮಾಣ್ಯವೆಂಬ ಗ್ರಂಥದಲ್ಲಿ ಪಂಚರಾತ್ರದ ವಿಚಾರವಾಗಿ ಇದ್ದ ದುರ್ಭಾವನೆಯನ್ನು ಖಂಡಿಸಿರುತ್ತಾರೆ. ವೇದಗಳಲ್ಲಿರುವುದನ್ನು ಸ್ಮೃತಿ, ಪುರಾಣಗಳು ಸುಲಭವಾಗಿ ಗ್ರಾಹ್ಯವಾಗಲು ಸರಳರೀತಿಯಲ್ಲಿ ತಿಳಿಸಿರುವಂತೆ ಆಗಮಗಳೂ ವೇದಗಳಲ್ಲಿ ತಿಳಿಸಿರುವುದನ್ನೇ ಸುಲಭ ರೀತಿಯಲ್ಲಿ ತಿಳಿಸಿರುತ್ತವೆ. ಪಂಚರಾತ್ರ ಆಗಮ ಅವೈದಿಕವಾದರೆ ಮಹಾಭಾರತ, ಭಾಗವತ ಮುಂತಾದ ಪುರಾಣಗಳೂ ಅವೈದಿಕವೆಂದು ಹೇಳಬೇಕಾಗುತ್ತದೆ. ಪಂಚರಾತ್ರ ವಿಧಿಸಿರುವ ವಿಗ್ರಹಪೂಜೆ ಮತ್ತು ಪ್ರಪತ್ತಿ (ಶರಣಾಗತಿ) ಮಾರ್ಗ ವೈದಿಕ ಮಾರ್ಗಗಳಿಗಿಂತ ಸುಲಭವಾದುವು ; ಬಹುಜನರ ಶ್ರೇಯಸ್ಸಾಧನೆಗೆ ಅನುಕೂಲವಾದುವು. ಮನುವು ಸಾತ್ವತರು ಪಂಚಮರೆಂದು ಹೇಳಿರಬಹುದು. ಆದರೆ ಸಾತ್ವತರೆಲ್ಲರೂ ಪಂಚಮರೇ ಅಲ್ಲ. ಸಾತ್ವತರಲ್ಲಿ ಶ್ರೋತ್ರಿಯ ಬ್ರಾಹ್ಮಣರೂ ಇದ್ದರು. ವೈಶ್ಯಾತ್ ತು ಜಾಯತೇ ವ್ರಾತ್ಯಾತ್ ಸುಧನ್ವಾಚಾರ್ಯ ಏವ ಚ । ಭಾರುಷಸ್ ಚ ನಿಜಂಘಸ್ ಚ ಮೈತ್ರಾ ಸಾತ್ವತಾ ಏವ ಚ ॥ ಎಂದು ಯಾಮುನಾಚಾರ್ಯರು ತೋರಿಸಿದ್ದಲ್ಲದೆ ಅವರು ಕೀಳು ಜಾತಿಯವರನ್ನು ತಮ್ಮ ಆಪ್ತ ಶಿಷ್ಯವರ್ಗದಲ್ಲಿ ಸೇರಿಸಿಕೊಂಡರು. ರಾಮಾನುಜಾಚಾರ್ಯರು ಕೆಳಜಾತಿಯವರನ್ನು ಗುರುಗಳನ್ನಾಗಿ ಮಾಡಿಕೊಂಡು ಅವರಿಂದ ಆಳ್ವಾರರ ತತ್ತ್ವವನ್ನು ತಿಳಿದುಕೊಂಡರು. ಅವರು ಪಂಚರಾತ್ರಾ

ಗಮವನ್ನೂ ಆಳ್ವಾರರುಗಳ ಪ್ರಬಂಧವನ್ನೂ ವೇದಕ್ಕೆ ಸಮಾನವಾದುವೆಂದು ಸ್ಥಾಪಿಸಿದರು. ಪಂಚಮರನ್ನು ಶ್ರೇಷ್ಠ ಕುಲದವರು (ತಿರುಕುಲತ್ತಾರ್) ಎಂದು ಕರೆದರು. ಜಾತಿಭೇದವನ್ನು ಎಣಿಸದೆ ಎಲ್ಲರಿಗೂ, ಸಾರ್ವತ್ರಿಕವಾಗಿ ಭಗವಂತನ ಉಪಾಸನೆಗೆ ಅವಕಾಶ ಕೊಟ್ಟ ಪಂಚರಾತ್ರ ಉಪಾದೇಯವಾದದ್ದು. ಜಾತಿಭೇದವನ್ನು ಎಣಿಸಿದವನು ಶ್ರೀವೈಷ್ಣವನಾಗಲಾರ. ಇಂಥ ಉದಾರವಾದ ಸಾತ್ವತ ಶ್ರೀವೈಷ್ಣವ ಇತರ ಪಂಥಗಳ ದರ್ಜೆಗೆ ಈಗ ಇಳಿದಿರುವುದು ತುಂಬ ಶೋಚನೀಯ.

## ಪಂಚರಾತ್ರಾಗಮ ಸಾಹಿತ್ಯ

ಪಂಚರಾತ್ರಾಗಮದ ಸಾಹಿತ್ಯ ಅಪಾರವಾದದ್ದು. ಅದರಲ್ಲಿ ಪುಸ್ತಕರೂಪದಲ್ಲಿ ಮುದ್ರಿತವಾಗಿರುವುದು ಸ್ವಲ್ಪಮಾತ್ರ, ಪಂಚರಾತ್ರಾಗಮಗಳನ್ನು ಸಂಹಿತೆಗಳೆಂದು ಕರೆಯುವುದುಂಟು. ಸಾತ್ವತ ಸಂಹಿತಾ, ಅಹಿರ್‌ಬುಧ್ನ್ಯ ಸಂಹಿತಾ, ಈಶ್ವರಸಂಹಿತಾ, ಹಯಶರೀರಸಂಹಿತಾ, ವಿಷ್ಣುತತ್ತ್ವ ಸಂಹಿತಾ, ಪರಮಸಂಹಿತಾ, ಪರಾಶರಸಂಹಿತಾ, ಪದ್ಮ ಸಂಹಿತಾ, ಪರಮೇಶ್ವರ ಸಂಹಿತಾ, ಪೌಷ್ಕರ ಸಂಹಿತಾ, ಪ್ರಕಾಶ ಸಂಹಿತಾ, ಮಹಾಸನತ್ಕುಮಾರ ಸಂಹಿತಾ, ಅನಿರುದ್ಧ ಸಂಹಿತಾ, ಕಾಶ್ಯಪ ಸಂಹಿತಾ, ವಿಹಗೇಂದ್ರ ಸಂಹಿತಾ, ಸುದರ್ಶನ ಸಂಹಿತಾ, ಅಗಸ್ತ್ಯ ಸಂಹಿತಾ, ವಸಿಷ್ಠ ಸಂಹಿತಾ, ವಿಷ್ಣು ಸಂಹಿತಾ, ಮಾರ್ಕಂಡೇಯ ಸಂಹಿತಾ, ಹಿರಣ್ಯಗರ್ಭ ಸಂಹಿತಾ—ಹೀಗೆ ಪಂಚರಾತ್ರಾಗಮ ಸಾಹಿತ್ಯ ವಿಪುಲವಾಗಿದೆ.

ಈಶ್ವರ ಸಂಹಿತೆಯು ಪಂಚರಾತ್ರ ಸಾಹಿತ್ಯ ಹೇಗೆ ಹುಟ್ಟಿತೆಂದು ತಿಳಿಸುತ್ತದೆ. ಮೊದಲಲ್ಲಿ ವಾಸುದೇವನು ಸೃಷ್ಟಿಸಿದ ಏಕಾಯನವೆಂಬ ವೇದ ಎಲ್ಲ ವೇದಗಳ ಮೂಲವಾಗಿತ್ತು. ಇತರ

ವೇದಗಳು ಅದರ ವಿಕಾರದಿಂದ ಹುಟ್ಟಿದವು. ಇವುಗಳಿಗೆ ವಿಕಾರವೇದಗಳೆಂದು ಹೆಸರು. ಜನರು ವಿಶೇಷವಾಗಿ ಲೋಕಾಭಿಮುಖರಾದ್ದರಿಂದ, ಈ ಏಕಾಯನವೇದ ವಿಕಾರವಾಗಿ ಹಲವು ವೇದಗಳು ಹುಟ್ಟಿದ್ದರಿಂದ ವಾಸುದೇವನು ಏಕಾಯನವೇದವನ್ನು ಹಿಂದಕ್ಕೆ ತೆಗೆದುಕೊಂಡು ಲಯಗೊಳಿಸಿದ. ಸನ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ, ಸನಾತನರೆಂಬ ಅವನ ಆಪ್ತಭಕ್ತರು ವಾಸುದೇವನನ್ನು ಪ್ರಾರ್ಥಿಸಿದಾಗ ಅವನು ಅದನ್ನು ಅವರಿಗೆ ಉಪದೇಶಿಸಿದನು. ಉಪನಿಷತ್ತಿನಲ್ಲಿ ಸನತ್ಸುಜಾತೀಯವೆಂಬ ಒಂದು ಅಧ್ಯಾಯವಿದೆ ಎಂದು ಇಲ್ಲಿ ಸ್ಮರಿಸಬಹುದು. ಇವರಿಗೆ ಏಕಾಂತಿಗಳೆಂದು ಹೆಸರು. ಅನಂತರ ಮರೀಚಿ, ಅತ್ರಿ, ಆಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಶಿಷ್ಠ ಮತ್ತು ಸ್ವಯಂಭುವರು ಅದನ್ನು ನಾರಾಯಣನಿಂದ ಪಡೆದರು. ಅದರ ಆಧಾರದ ಮೇಲೆ ಸಂಕರ್ಷಣನ ಪ್ರೇರಣೆಯಿಂದ ಸಾತ್ವತ,ಪೌಷ್ಕರ,ಜಯಾಖ್ಯ ಮುಂತಾದ ಪಂಚರಾತ್ರಾಗಮಗಳು ರಚಿತವಾದುವು. ಶಾಂಡಿಲ್ಯನೂ ಏಕಾಯನ ತತ್ತ್ವವನ್ನು ಸಂಕರ್ಷಣನಿಂದ ತಿಳಿದುಕೊಂಡು ಅದನ್ನು ಋಷಿಗಳಿಗೆ ಬೋಧಿಸಿದನು. ನಾರಾಯಣನಿಂದ ಪಡೆದ ತತ್ತ್ವದ ಆಧಾರದ ಮೇಲೆ ರಚಿತವಾದ ಶಾಸ್ತ್ರವನ್ನು ಸಾತ್ತ್ವಿಕ ಶಾಸ್ತ್ರವೆಂದೂ, ಅದರ ಸ್ವಲ್ಪಭಾಗವನ್ನು ಮಾತ್ರ ಅಳವಡಿಸಿಕೊಂಡು ತಮ್ಮ ಸ್ವಬುದ್ಧಿಯಿಂದಲೇ ರಚಿಸಿದ ಶಾಸ್ತ್ರವನ್ನು ರಾಜಸಶಾಸ್ತ್ರವೆಂದೂ, ಮಾನವರು ರಚಿಸಿದ ಶಾಸ್ತ್ರವನ್ನು ತಾಮಸಿಕ ಶಾಸ್ತ್ರವೆಂದೂ ಕರೆದಿದೆ. ರಾಜಸಶಾಸ್ತ್ರ ಎರಡು ವಿಧವಾಗಿದೆ. ಒಂದು ಪಂಚರಾತ್ರ, ಇನ್ನೊಂದು ವೈಖಾನಸ. ಪಂಚರಾತ್ರ ಆಗಮಗಳಲ್ಲಿ ಸಾತ್ವತ ಆಗಮ ಅತ್ಯಂತ ಶ್ರೇಷ್ಠವಾದುದೆಂದು ಪರಿಗಣಿಸಲಾಗಿದೆ. ಅದು

ಭಗವಂತನು ಸಂಕರ್ಷಣನೊಡನೆ ನಡಸಿದ ಸಂವಾದರೂಪದಲ್ಲಿದೆ.

**ಸಂಹಿತೆಗಳ ಸಂಗ್ರಹ ವರ್ಣನೆ**

ಈಶ್ವರ ಸಂಹಿತೆ ಇಪ್ಪತ್ತೈದು ಅಧ್ಯಾಯಗಳಿಂದ ಕೂಡಿದೆ. ಅವುಗಳಲ್ಲಿ ಹದಿನಾರು ಅಧ್ಯಾಯಗಳು ಪೂಜಾವಿಧಾನಗಳಿಗೂ, ಒಂದು ವಿಗ್ರಹಗಳ ವರ್ಣನೆಗೂ, ಒಂದು ಧ್ಯಾನವಿಚಾರಕ್ಕೂ, ಒಂದು ಮಂತ್ರವಿಚಾರಕ್ಕೂ, ಒಂದು ಪ್ರಾಯಶ್ಚಿತ್ತಗಳಿಗೂ, ಒಂದು ದಮಕ್ಕೂ, ಕೊನೆಯದು ಯಾದವಗಿರಿಯ ವರ್ಣನೆಗೂ ಮೀಸಲಾಗಿದೆ. ಇದು 1921ರಲ್ಲಿ ಕಾಂಜೀವರದಲ್ಲಿ ಮುದ್ರಿತವಾಯಿತು. ಹಯಶಿರಸಂಹಿತೆ ನಾಲ್ಕು ಭಾಗಗಳುಳ್ಳ ದೊಡ್ಡ ಸಂಹಿತೆ. ಮೊದಲನೆಯದು ಪ್ರತಿಷ್ಠಾ ಕಾಂಡ. ಇದರ ನಲವತ್ತೆರಡು ಅಧ್ಯಾಯಗಳಲ್ಲಿ ವಿಗ್ರಹ ಪ್ರತಿಷ್ಠೆಯನ್ನು ಸುದೀರ್ಘವಾಗಿ ವರ್ಣಿಸಿದೆ. ಮೂವತ್ತೇಳು ಅಧ್ಯಾಯಗಳಿಂದ ಕೂಡಿದ ಎರಡನೆಯದಾದ ಸಂಕರ್ಷಣಕಾಂಡ ಇಪ್ಪತ್ತು ಅಧ್ಯಾಯಗಳಿಂದ ಕೂಡಿದೆ. ಮೂರನೆಯದಾದ ಕಾಂಡ ಲಿಂಗ ಕಾಂಡ. ನಾಲ್ಕನೆಯದಾದ ಸಾರತಾರಣ ನಲವತ್ತೈದು ಅಧ್ಯಾಯಗಳುಳ್ಳ ದೊಡ್ಡ ಕಾಂಡ. ಈ ಮೂರು ಕಾಂಡಗಳು ವಿಗ್ರಹಗಳ ರಚನೆ ಮತ್ತು ವಿಗ್ರಹಗಳ ಪೂಜಾವಿಧಾನಗಳನ್ನು ತಿಳಿಸುತ್ತವೆ. ಇದು ಮುದ್ರಿತವಾಗಿಲ್ಲ. ಮೂವತ್ತೊಂಭತ್ತು ಅಧ್ಯಾಯಗಳುಳ್ಳ ವಿಷ್ಣುಸಂಹಿತೆಯಲ್ಲಿ ಪೂಜಾವಿಧಾನಗಳನ್ನಲ್ಲದೆ ಶೌಚವಿಧಿಗಳನ್ನೂ ಭಕ್ತರು ತಮ್ಮ ಹಣೆಯ ಮೇಲೆ ತೋಳುಗಳ ಮೇಲೆ ಎದೆಯಮೇಲೆ ಧರಿಸುವ ನಾಮಗಳನ್ನೂ ಮುದ್ರೆಗಳನ್ನೂ ವಿವರಿಸುತ್ತದೆ. ಇದೂ ಮುದ್ರಣವಾಗಿಲ್ಲ. ಮೂವತ್ತೊಂದು ಅಧ್ಯಾಯಗಳುಳ್ಳ ಪರಮಸಂಹಿತೆ ಪೂಜಾವಿಧಾನಗಳನ್ನಲ್ಲದೆ ದೀಕ್ಷಾವಿಧಿಗಳನ್ನೂ ಜಗತ್ತಿನ ಸೃಷ್ಟಿಯನ್ನೂ ಜ್ಞಾನಯೋಗವನ್ನೂ ವಿವರಿಸು

ತ್ತದೆ. ಇದೂ ಮುದ್ರಿತವಾಗಿಲ್ಲ. ಪರಾಶರ ಸಂಹಿತೆ ಎಂಟು ಅಧ್ಯಾಯ ಗಳ ಸಣ್ಣ ಸಂಹಿತೆ. ಬಗೆಬಗೆಯ ಭಗವನ್ನಾಮೋಚ್ಚಾರಣೆಗಳನ್ನು ವಿವರಿಸುವುದೇ ಇದರ ವೈಶಿಷ್ಟ್ಯ. ಉಳಿದ ಸಂಹಿತೆಗಳು ಹೀಗೆಯೇ ವಿಗ್ರಹರಚನೆ, ಪ್ರತಿಷ್ಠಾಪನೆ ಪೂಜಾವಿಧಾನಗಳು ಮಂತ್ರ ಮತ್ತು ನಾಮೋಚ್ಚಾರಣೆ, ದೀಕ್ಷೆ, ಅಂತ್ಯಕ್ರಿಯೆ, ಶೌಚ, ಪ್ರಾಯಶ್ಚಿತ್ತ ಮುಂತಾದ ಪ್ರಯೋಗಕ್ಕೆ ಹೆಚ್ಚು ಗಮನಕೊಡುತ್ತವೆ. ಇವುಗಳೂ ಕೂಡ ಮುದ್ರಿತವಾಗಿಲ್ಲ. ವಿಷ್ಣುಸಂಹಿತೆ ವಿಶೇಷವಾಗಿ ಸಾಂಖ್ಯ ತತ್ತ್ವಗಳಿಗೆ ಗಮನಕೊಡುತ್ತದೆ. ವಿಷ್ಣುವಿನ ವ್ಯಕ್ತ ಮತ್ತು ಅವ್ಯಕ್ತ ದೆಶೆಗಳನ್ನು ವಿವರಿಸುತ್ತದೆ. ಷಡಂಗ ಯೋಗವನ್ನು ಭಾಗವತ ಯೋಗ ವಾಗಿ ಮಾರ್ಪಡಿಸಿದೆ. ಮಾರ್ಕಂಡೇಯ ಸಂಹಿತೆ, ಸಂಹಿತೆಗಳ ಸಂಖ್ಯೆ ನೂರೆಂಟೆಂದು ಹೇಳಿ ತೊಂಭತ್ತೊಂದು ಸಂಹಿತೆಗಳನ್ನು ಮಾತ್ರ ಹೆಸರಿಸಿದೆ. ವಿಷ್ವಕ್ಸೇನ ಸಂಹಿತೆ ತುಂಬ ಪುರಾತನ ಸಂಹಿತೆ. ಅದರ ಭಾಗಗಳನ್ನು ರಾಮಾನುಜಾಚಾರ್ಯರು ಉಲ್ಲೇಖಿಸಿರು ತ್ತಾರೆ.

ತತ್ತ್ವವಿಚಾರಕ್ಕೆ ಹೆಚ್ಚು ಗಮನ ಕೊಡುವ ಸಂಹಿತೆಗಳಲ್ಲಿ ಜಯಾಖ್ಯ ಸಂಹಿತೆ ಮತ್ತು ಅಹಿರ್‌ಬುಧ್ನ್ಯ ಸಂಹಿತೆಗಳು ಮುಖ್ಯವಾದವು. ಇವೆರಡೂ ಅಚ್ಚಾಗಿವೆ.

## ಜಯಾಖ್ಯ ಸಂಹಿತೆಯ ತತ್ತ್ವ

ಜಯಾಖ್ಯದಲ್ಲಿ ಶಾಂಡಿಲ್ಯನು ಗಂಧಮಾದನ ಪರ್ವತದ ಮೇಲೆ ಋಷಿಗಳಿಗೆ ಶಾಶ್ವತ ತತ್ತ್ವವನ್ನು ಬೋಧಿಸುತ್ತಾನೆ. ಯಜ್ಞ, ದಾನ, ವೇದಪಠನ ಮುಂತಾದವುಗಳಿಂದ ಮೋಕ್ಷ ಸಾಧ್ಯವಿಲ್ಲ. ಪರತತ್ತ್ವದ ಜ್ಞಾನವೇ ಮೋಕ್ಷಕ್ಕೆ ಸಾಧನವಾದುದರಿಂದ ಆ ಪರತತ್ತ್ವ ಯಾವುದೆಂಬುದನ್ನು ತಿಳಿಸಲು ಪ್ರಾರಂಭಿಸುತ್ತಾನೆ.

(ಅ) ಬ್ರಹ್ಮವೇ ಪರತತ್ತ್ವ. ಬ್ರಹ್ಮನ್ ಶುದ್ಧ ಚೇತನ ಮತ್ತು ಆನಂದರೂಪ. ಅವನು ಸ್ವಸಂವೇದ್ಯ ಮತ್ತು ಎಲ್ಲದರ ಆಧಾರ (ಜಯಖ್ಯ ಸಂಹಿತಾ iv.76). ಅವನು ಅನಾದಿ, ಅನಂತ. ಅವನನ್ನು ಸತ್ ಎಂದರೆ ಇರುವವನು ಎಂದಾಗಲಿ, ಅಸತ್ ಎಂದರೆ ಇಲ್ಲದವನು (ನ ಸತ್ ನಾಸದ್ ಉಚ್ಯತೇ) ಎಂದಾಗಲಿ ಹೇಳಲಾಗುವುದಿಲ್ಲ. ಬ್ರಹ್ಮವನ್ನು ಉಪನಿಷತ್ತುಗಳಲ್ಲಿ ವರ್ಣಿಸಿರುವಂತೆಯೇ ಇಲ್ಲೂ ವರ್ಣಿಸಿದೆ. ಅವನು ಗುಣರಹಿತನಾದರೂ ಗುಣಗಳಿಂದ ಹುಟ್ಟಿದ ಎಲ್ಲದರ ಭೋಕ್ತೃ. ಅವನು ಎಲ್ಲದರ ಒಳಗೂ ಇರುತ್ತಾನೆ, ಅವುಗಳೆಲ್ಲಕ್ಕಿಂತ ಅತೀತನಾಗಿಯೂ ಇರುತ್ತಾನೆ. ಅವನು ಸರ್ವಜ್ಞ, ಸರ್ವದರ್ಶಿ, ಸರ್ವಾಧ್ಯಕ್ಷ; ಎಲ್ಲವೂ ಅವನಲ್ಲಿವೆ. ಅವನಲ್ಲಿ ಸಕಲ ಶಕ್ತಿಗಳೂ ಕೇಂದ್ರಿತವಾಗಿ ಸ್ವಪ್ರೇರಣೆಯಿಂದ ಆತ್ಮಸಂತೋಷದಿಂದ ಹೊರಹೊಮ್ಮುತ್ತವೆ. ಅವನು ಎಲ್ಲದರಲ್ಲಿ ಇದ್ದರೂ ಅವನು ಕಣ್ಣಿಗೆ ಕಾಣಿಸುವುದಿಲ್ಲವಾದುದರಿಂದ ಅಸತ್ ಎಂದು ವರ್ಣಿಸುತ್ತಾರೆ. ಈ ಬ್ರಹ್ಮವನ್ನು ಅಪರೋಕ್ಷಜ್ಞಾನದಿಂದ ಮಾತ್ರ ಅಂದರೆ ಮಾನಸಿಕ ಪ್ರತ್ಯಕ್ಷದಿಂದ ಮಾತ್ರ ನೇರವಾಗಿ ತಿಳಿಯಬಹುದು. ನಾವು ಪುಷ್ಪಗಳ ಪರಿಮಳವನ್ನು ಇಂದ್ರಿಯಗಳ ಮೂಲಕ ಪ್ರತ್ಯಕ್ಷವಾಗಿ ತಿಳಿಯುವಂತೆ, ಮಾನಸಿಕ ಚಕ್ಷುವಿನಿಂದ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಕಾಲದೇಶಗಳಲ್ಲಿರುವ ಎಲ್ಲವೂ ಅವನಲ್ಲಿ ಇರುತ್ತವೆಯಾದರೂ ಅವನು ಕಾಲದೇಶಗಳ ಉಪಾಧಿಗೆ ಒಳಪಟ್ಟಿಲ್ಲ. ಕೆಂಪಗೆ ಕಾದ ಕಬ್ಬಿಣದ ಗುಂಡಿನಲ್ಲಿ ತೀಕ್ಷ್ಣವಾದ ಉಷ್ಣ ಅದರೊಡನೆ ಐಕ್ಯವಾಗಿರುವಂತೆ ಬ್ರಹ್ಮನೂ ವಿಶ್ವದಲ್ಲಿ ಐಕ್ಯವಾದಂತೆ ಇರುತ್ತಾನೆ. ಆದರೂ ಅವನು ನಿಜವಾಗಿ ಅತೀತ. ಅವನು ಪ್ರತಿ

ಬಿಂಬಿಸಿದ ವಸ್ತುಗಳು ಒಂದು ವಿಧವಾಗಿ ಆದರಲ್ಲಿ ಇರುವಂತೆ ಕಂಡರೂ ಅವನು ಈ ವಿಶ್ವದಲ್ಲಿ ಪ್ರತಿಬಿಂಬಿತವಾದರೂ ಆ ಪ್ರತಿಬಿಂಬದಲ್ಲಿ ಅವನು ಇಲ್ಲ. ಅವನು ವಿಶ್ವಸಂಗಿ ಹಾಗೂ ನಿಸ್ಸಂಗಿ. ಸಸ್ಯಗಳಲ್ಲಿ ರಸ ವ್ಯಾಪಿಸಿರುವಂತೆ ಸಕಲ ಚೇತನ ಮತ್ತು ಅಚೇತನ ವಸ್ತುಗಳನ್ನು ಪರಮೇಶನು ವ್ಯಾಪಿಸಿರುತ್ತಾನೆ (ಚೇತನಾಚೇತನಾಃ ಸರ್ವೇ ಭೂತಾಃ ಸ್ಥಾವರಜಂಗಮಾಃ । ಪೂರಿತಃ ಪರಮೇಶೇನ ರಸೇಷ್ವೌಷಧಯಃ ಯಥಾ (ಅದೇ, iv. 93) ಪರಮೇಶ್ವರನನ್ನು ತರ್ಕದಿಂದ ತಿಳಿಯಲಾಗುವುದಿಲ್ಲ ; ಮಾನಸಿಕ ಪ್ರತ್ಯಕ್ಷದಿಂದ ಆರ್ಷಜ್ಞಾನದಿಂದ ಮಾತ್ರ ತಿಳಿಯಲು ಸಾಧ್ಯ.

ಬೆಂಕಿ ಕಟ್ಟಿಗೆಯಲ್ಲಿದೆ, ಬೆಣ್ಣೆ ಮೊಸರಿನಲ್ಲಿದೆ, ನದಿಗಳು ಸಮುದ್ರದಲ್ಲಿ ಐಕ್ಯವಾಗುತ್ತವೆ. ಹೀಗೆ ಐಕ್ಯವಾದಾಗ ಅವುಗಳ ವ್ಯತ್ಯಾಸ ಕಂಡುಬರದಿದ್ದರೂ ಅವುಗಳಲ್ಲಿ ವ್ಯತ್ಯಾಸವಿದೆ. ಹಾಗೆಯೇ, ಯೋಗಿಗಳು ಪರಮಾತ್ಮನಲ್ಲಿ ಐಕ್ಯವಾದಾಗ ಭೇದ ಕಾಣದಿದ್ದರೂ ಯೋಗಿಗೂ ಬ್ರಹ್ಮಕ್ಕೂ ವ್ಯತ್ಯಾಸವಿದ್ದೇ ಇದೆ. ಸರಿತ್‌ಸಂಘಾದ್ ಯಥಾ ತೋಯಂ ಸಂಪ್ರತಿಷ್ಠಮ್ ಮಹೋದಧೌ । ಅಲಕ್ಷ್ಯಂ-ಶ್ಚೋದಕೇ ಭೇದಾಃ ಪರಸ್ಮಿನ್ ಯೋಗಿನಾಂ ತಥಾ ॥ (ಅದೆ. iv 123). ಸಮುದ್ರದ ನೀರಿಗೂ ನದಿಗಳ ನೀರಿಗೂ, ಭೇದವೂ ಭೇದರಾಹಿತ್ಯವೂ ಇರುವಂತೆ, ಪರಮಾತ್ಮನಿಗೂ ಭಕ್ತರಿಗೂ ಭೇದವೂ ಇದೆ. ಅಭೇದವೂ ಇದೆ. ಇಲ್ಲಿಯ ತತ್ತ್ವ ಭೇದಾಭೇದತತ್ತ್ವ. ಅದು ದ್ವೈತವೂ ಅಲ್ಲ, ಅದ್ವೈತವೂ ಅಲ್ಲದ ದ್ವೈತಾದ್ವೈತ.

(ಆ). ಸೃಷ್ಟಿ. ಜಯಾಖ್ಯವು ಮೂರು ಬಗೆಯ ಸೃಷ್ಟಿಗಳನ್ನು ತಿಳಿಸುತ್ತದೆ. ಮೊದಲನೆಯದು ಬ್ರಹ್ಮಸರ್ಗ, ಎರಡನೆಯದು

ಪ್ರಕೃತಿ ಸರ್ಗ, ಮೂರನೆಯದು ಶುದ್ಧಸರ್ಗ.

೧. ಬ್ರಹ್ಮಸರ್ಗ ವರ್ಣನೆ ಪೌರಾಣಿಕ. ಮೊದಲಲ್ಲಿ ವಿಷ್ಣುವು ಬ್ರಹ್ಮನನ್ನು ಸೃಷ್ಟಿಸಿದನು. ಬ್ರಹ್ಮನು ತನ್ನ ಮಮಕಾರದಿಂದ ಸೃಷ್ಟಿಯನ್ನು ಕಲುಷಿತಗೊಳಿಸಿದನು. ಅವನ ಬೆವರಿನ ಎರಡು ತೊಟ್ಟುಗಳಿಂದ ಮಧು ಮತ್ತು ಕೈಟಭರೆಂಬ ರಾಕ್ಷಸರು ಹುಟ್ಟಿದರು. ಇವರು ವೇದಗಳನ್ನು ಅಪಹರಿಸಿ ದೇವತೆಗಳನ್ನು ಹಿಂಸಿಸಿದರು. ಆಗ ವಿಷ್ಣುವು ಅವರೊಡನೆ ಭೌತಬಲದಿಂದ ಹೋರಾಡಿದಾಗ ಅವರನ್ನು ಗೆಲ್ಲಲಾಗಲಿಲ್ಲ. ಕೊನೆಯಲ್ಲಿ ಮಂತ್ರಬಲದಿಂದ ಅವರನ್ನು ನಾಶಗೊಳಿಸಿ ವೇದಗಳನ್ನು ದೇವತೆಗಳಿಗೆ ಕೊಟ್ಟು ಅವರನ್ನು ಕಾಪಾಡಿದನು. ಇದು ಪೌರಾಣಿಕ ಸೃಷ್ಟಿಯ ವಿವರಣೆ.

೨. ಪ್ರಕೃತಿಯ ಮೂಲಕ ಸೃಷ್ಟಿಯಾದದ್ದನ್ನು ಪ್ರಕೃತಿಸರ್ಗ ವಿವರಿಸುತ್ತದೆ. ಈ ಸೃಷ್ಟಿಕ್ರಮ ಸಾಂಖ್ಯದಲ್ಲಿ ಹೇಳಿರುವ ಸೃಷ್ಟಿಯನ್ನು ಹೋಲುತ್ತದೆ. ಸೃಷ್ಟಿಗೆ ಮೂಲವಾದ ಪ್ರಕೃತಿಗೆ ಪ್ರಧಾನವೆಂದು ಹೆಸರು. ಪ್ರದೀಪದಲ್ಲಿ ಬತ್ತಿ, ಎಣ್ಣೆ. ಬೆಂಕಿ ಸೇರಿರುವಂತೆ ಪ್ರಕೃತಿಯಲ್ಲಿ ಮೂರು ಬೇರೆ ಬೇರೆಯಾದ ಗುಣಗಳು ಪ್ರಕೃತಿ (ಪ್ರಧಾನ) ಯಲ್ಲಿ ಎಡೆಬಿಡದೆ ಸೇರಿವೆ (ಭಿನ್ನಂ ಏಕಾತ್ಮ-ಲಕ್ಷಣಮ್). ಇವು ಪ್ರಧಾನದಲ್ಲಿ ಸಮತೋಲನದಲ್ಲಿರುತ್ತವೆ. ಈ ಸಮತೂಕ ತಪ್ಪಿದಾಗ ಮೊಟ್ಟಮೊದಲಿಗೆ ಸತ್ತ್ವ ಕಾಣಿಸಿಕೊಳ್ಳುತ್ತದೆ, ಅನಂತರ ರಜಸ್ ಕಾಣಿಸಿಕೊಳ್ಳುತ್ತದೆ, ಕೊನೆಯಲ್ಲಿ ತಮಸ್ ಕಾಣಿಸಿಕೊಳ್ಳುತ್ತದೆ. ಸತ್ತ್ವಪ್ರಧಾನವಾದ ಪ್ರಕೃತಿಯ ಮೊದಲ ಪರಿಣಾಮ ಬುದ್ಧಿ. ಎರಡನೆಯ ಪರಿಣಾಮ ಬುದ್ಧಿಯಿಂದ ಹುಟ್ಟಿದ ಅಹಂಕಾರ. ಅಹಂಕಾರದ ಮೂರು ಬಗೆಗಳನ್ನು ವಿವರಿಸುವುದು ಜಯಾಖ್ಯೆಯ ವೈಶಿಷ್ಟ್ಯ. ಸಾಂಖ್ಯದಲ್ಲಿ ಈ ಮೂರು ಬಗೆ

ಗಳನ್ನು ಹೇಳಿರುವುದಿಲ್ಲ. ಪ್ರಕಾಶಾತ್ಮ, ವಿಕೃತಾತ್ಮ, ಭೂತಾತ್ಮ, ಇವು ಮೂರು ಬಗೆಯ ಅಹಂಕಾರಗಳು. ಪ್ರಕಾಶಾತ ಅಹಂಕಾರ ದಿಂದ ಪಂಚಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಗೆ, ಸ್ಪರ್ಶೇಂದ್ರಿಯ) ಮತ್ತು ಮನಸ್ ಹುಟ್ಟುತ್ತವೆ. ಎರಡ ನೆಯದಾದ ವಿಕೃತಾತ್ಮದಿಂದ ಐದು ಕರ್ಮೇಂದ್ರಿಯಗಳು ಹುಟ್ಟು ತ್ತವೆ. ಮೂರನೆಯದಾದ ಭೂತಾತ್ಮದಿಂದ ಸ್ಥೂಲಭೂತಗಳಿಗೆ ಮೂಲ (ಯೋನಿ) ವಾದ ತನ್ಮಾತ್ರಗಳು ಹುಟ್ಟುತ್ತವೆ. ಈ ಸೂಕ್ಷ್ಮ ಭೂತಗಳಿಂದ ಸ್ಥೂಲವಾದ ಇಂದ್ರಿಯಗೋಚರವಾದ ಮಣ್ಣು ನೀರು, ವಾಯು ಬೆಂಕಿ ಮುಂತಾದ ವಸ್ತುಗಳು ಹುಟ್ಟುತ್ತವೆ. ಪ್ರಕೃತಿ ಭೌತವಾದದ್ದು. ಆದ್ದರಿಂದ ಅದರ ಈ ಪರಿಣಾಮಗಳೆಲ್ಲ ಭೌತವಾದುವು. ಪುರುಷರು, ಜೀವಿಗಳು ಈ ಭೌತವಸ್ತುಗಳಿಗಿಂತ ಭಿನ್ನ. ಅವು ಚೇತನಾತ್ಮಕವಾದುವು.

ಪ್ರಕೃತಿಯ ಪರಿಣಾಮವಾದ ಶರೀರ ಜಡ, ಚೇತನ ಜಡ ವಲ್ಲದ್ದು. ಪರಸ್ಪರ ವಿರುದ್ಧವಾದ ಇವು ಜೀವನಲ್ಲಿ ಹೇಗೆ ಸೇರಿ ರಲು ಸಾಧ್ಯ ಎಂಬ ಪ್ರಶ್ನೆ ಹುಟ್ಟುತ್ತದೆ. ಇದಕ್ಕೆ ಜಯಾಖ್ಯದ ಉತ್ತರ ಇದು. ಪ್ರಕೃತಿಯ ಪರಿಣಾಮಗಳು ಬ್ರಹ್ಮಚೇತನದ ಪ್ರಕಾಶದಿಂದ ಬೆಳಗಿ ಅವು ಚೇತನ ಪಡೆದಂತೆ ಕಾಣುತ್ತವೆ (ಚಿದ್ರೂಪಂ ಆತ್ಮತತ್ತ್ವಂ ಯದ್ ಅಭಿನ್ನಂ ಬ್ರಹ್ಮಣಿ ಸ್ಥಿತಂ ! ತೇನೈತಚ್ಛುರಿತನ್ ಭಾತಿ ಅಚಿಚಿನ್ಮಯವದ್ ದ್ವಿಜ (iii.14) ಇದನ್ನು ಸ್ಪಷ್ಟಪಡಿಸಲು ಜಯಾಖ್ಯವು ಒಂದು ಉಪಮಾನವನ್ನು ಕೊಡುತ್ತದೆ. ಕಬ್ಬಿಣದ ಸೂಜಿ ಮತ್ತು ಅಯಸ್ಕಾಂತ (ಸೂಜಿಕಲ್ಲು) ಬೇರೆ ಬೇರೆ ಆದರೂ ಅಯಸ್ಕಾಂತದ ಸಂಸರ್ಗದಿಂದ ಸೂಜಿಯಲ್ಲಿ ಅಯಸ್ಕಾಂತದ ಶಕ್ತಿ ತೋರುತ್ತದೆ. ಹಾಗೆಯೇ ಚೇತನದ

ಸಂಪರ್ಕದಿಂದ ಶರೀರ ಚೇತನದಿಂದ ಕೂಡಿದಂತೆ ಕಾಣುತ್ತದೆ. ಪ್ರಕೃತಿಯ ವಾಸನಾವಿಶೇಷಗಳ ಮತ್ತು ಚೇತನದ ಸಾಹಚರ್ಯ ಅನಾದಿ. ಈ ಸಂಸರ್ಗ ತಪ್ಪಿ ಜೀತನವು ಮುಕ್ತಿ ಪಡೆಯುವುದಕ್ಕೆ ಭಗವಂತನ ಪ್ರೇರಣೆ ಕಾರಣ. ಭಗವಂತನು ಜೀವರುಗಳಲ್ಲಿ ಅಂತರಾತ್ಮನಾಗಿ ಇರುತ್ತಾನೆ. ಈ ಅಂತರಾತ್ಮದ ಪ್ರೇರಣೆಯಿಂದ ಜೀವರುಗಳು ತಾವು ಶರೀರದಿಂದ ಬೇರೆ ಎಂಬ ಜ್ಞಾನ ಪಡೆಯುತ್ತಾರೆ. ಆ ಜ್ಞಾನೋದಯವಾದಾಗ ವಾಸನಾರೂಪವಾದ ಕರ್ಮ ಅಳಿದು ಅವರು ಮುಕ್ತರಾಗುತ್ತಾರೆ. ಆತ್ಮಗಳು ಶರೀರದ ವಾಸನೆಗಳ ಸಂಪರ್ಕ ಪಡೆದು ಬಂಧಿತರಾಗುವುದಕ್ಕೂ ಆ ವಾಸನೆಗಳು ಜ್ಞಾನದಿಂದ ಕೊಚ್ಚಿಹೋಗಿ ಅಂತಃಕರಣ ಶುದ್ಧವಾಗುವುದಕ್ಕೂ ಭಗವಂತನ ಶಕ್ತಿಯೇ ಕಾರಣ. ಅದು ಅಂತರ್ಯಾಮಿ ಶಕ್ತಿ.

ಜೀವನ ಚೇತನವನ್ನು ಕವಿದಿರುವ ವಾಸನಾರೂಪ ಭಗವಂತನ ಮಾಯಾಶಕ್ತಿ. ಈ ಮಾಯೆಯಿಂದ ಕವಿದಿರುವ ಜೀವ ಚೇತನ ಬಂಧನಕ್ಕೆ ಒಳಗಾಗಿದೆ. ಈ ವಾಸನೆಗಳು ಜಡ, ಪ್ರಕೃತಿಯ ಗುಣ ಪರಿಣಾಮಗಳು ಎಂಬುದನ್ನು ಅಂತರ್ಯಾಮಿಯ ಪ್ರೇರಣೆಯಿಂದ ತಿಳಿದಾಗ ಮಹಾರೂಪವಾದ ಸಂಸರ್ಗ ಕಡಿದು ಹೋಗುತ್ತದೆ. (ಮಾಯಾಮಯೋ ದ್ವಿಜಾಧಾರೇ ಗುಣಾಧಾರೇ ತತೋ ಜಡೇ । ಶಕ್ತ್ಯಾ ಸಂಯೋಜಿತೋ ಹಿ ಆತ್ಮಾ ವೇತ್ತಿ ಆತ್ಮೀಯಾಃ ಚ ವಾಸನಾಃ (iii.24)

೩. ಮೂರನೆಯ ಸೃಷ್ಟಿ ಶುದ್ಧಸರ್ಗ. ಇದು ಪರಮಾತ್ಮನ ಮೂರು ಸ್ವರೂಪಗಳಿಗೆ ಸಂಬಂಧಿಸಿದುದು. ಪುರುಷೋತ್ತಮನಾದ ವಾಸುದೇವನು ತನ್ನಿಂದಲೇ ಮೂರು ರೂಪಗಳನ್ನು ಹೊರ

ಹೊಮ್ಮಿಸಿದನು. ಮೂರು ರೂಪಗಳು, ಅಚ್ಯುತ ಸತ್ಯ ಮತ್ತು ಪುರುಷ. ಅಚ್ಯುತ, ಸತ್ಯ ಪರರೂಪಗಳು ಪುರುಷ ಅಪರೂಪ. ಈ ಅಪರೂಪವೇ ಅಂತರ್ಯಾಮಿ ರೂಪ. ಈ ಅಂತರ್ಯಾಮಿಯಾಗಿ ಭಗವಂತನು ಜಗತ್‌ಸಂಸಾರದ ನೇತಾರನಾಗಿರುತ್ತಾನೆ. ವಾಸನಾರೂಪವಾದ ಮಾಯೆಯಿಂದ ಬಂಧಿತವಾದ ಜೀವರುಗಳಲ್ಲಿ ಅಂತರ್ಯಾಮಿಯಾಗಿ ಆ ವಾಸನೆಗಳ ಕಟ್ಟಿನಿಂದ ಬಿಡುಗಡೆಯಾಗುವ ಮಾರ್ಗಗಳನ್ನು ಅವರಿಗೆ ತೋರಿಸುತ್ತಾನೆ.

(ಇ) ಬಿಡುಗಡೆಯ ಮಾರ್ಗಗಳು. ಜೀವರುಗಳಿಗೆ ಬಿಡುಗಡೆಯ ದಾರಿ ಗೋಚರವಾಗುವುದು ಭಗವಂತನ ಪ್ರಸಾದದಿಂದ. ಜೀವರುಗಳು ಬಿಡುಗಡೆಯ ದಾರಿಯನ್ನು ಕಂಡುಕೊಳ್ಳಲು ಗುರುವನ್ನು ಆಶ್ರಯಿಸಬೇಕೆಂಬ ಸದ್ಭಾವನೆಯನ್ನು ಹುಟ್ಟಿಸುತ್ತಾನೆ. ಜಯಾಖ್ಯ ಗುರುವಿಗೆ ವಿಶೇಷ ಪ್ರಾಶಸ್ತ್ಯ ಕೊಟ್ಟಿದೆ. ಗುರುವನ್ನು ಆಶ್ರಯಿಸುವದೇ ಮುಕ್ತಿಗೆ ಮೊದಲ ಸಾಧನ. ಗುರುವು ಶಿಷ್ಯನನ್ನು ಒಪ್ಪಿಕೊಂಡು ಅವನಿಗೆ ದೀಕ್ಷೆ ಕೊಟ್ಟು ಮಂತ್ರೋಪದೇಶ ಮಾಡಿದಾಗ ದೀಕ್ಷೆಪಡೆದವನ ಮನಸ್ಸು ಇಂದ್ರಿಯಸುಖಗಳಿಂದ ವಿಮುಖವಾಗುತ್ತದೆ, ಅವನ ಅಂತಃಕರಣ ಶರತ್ಕಾಲದ ಸರಸ್ಸಿನಂತೆ ಶುಭ್ರವಾಗುತ್ತದೆ, ಅಲೆಗಳಿಲ್ಲದ ಸಮುದ್ರದಂತೆ ಶಾಂತವಾಗಿರುತ್ತದೆ, ಗಾಳಿಯಿಂದ ಅಲುಗಾಡದ ದೀಪದಂತೆ ನಿಶ್ಚಲವಾಗಿರುತ್ತದೆ.

(ಉ) ಜಯಾಖ್ಯವು ಭಗವಂತನ ಜ್ಞಾನೋಪಾಸನೆಯನ್ನು ಕ್ರಿಯಾಖ್ಯ ಮತ್ತು ಸತ್ತಾಖ್ಯ ಎಂದು ಎರಡಾಗಿ ವಿಂಗಡಿಸಿದೆ. ಸತ್ತಾಖ್ಯ ಜ್ಞಾನಕ್ಕೆ ಕ್ರಿಯಾಖ್ಯ ಜ್ಞಾನ ಅಂಗಭೂತವಾದದ್ದು. ಮುಮುಕ್ಷು ಆಚರಿಸಬೇಕಾದ ಕರ್ಮಗಳ ಜ್ಞಾನ ಕ್ರಿಯಾಖ್ಯ. ಸದಾಚಾರವೇ ಕ್ರಿಯಾಖ್ಯ. ಶೌಚ, ಯಜ್ಞ, ತಪಸ್, ಶಾಸ್ತ್ರ

ಧ್ಯಯನ, ಅಹಿಂಸೆ, ತಪ್ಪೆಣಿಸದಿರುವುದು, ತಪ್ಪನ್ನು ಕ್ಷಮಿಸುವುದು, ಸತ್ಯವಚನ, ಸಕಲಭೂತಹಿತ, ಶತ್ರುಗಳಿಗೂ ಕೂಡ ಹಿತಬಯಸು ವುದು, ಇತರರ ಹಕ್ಕು ಬಾಧ್ಯತೆಗಳನ್ನು ಗೌರವಿಸುವುದು, ಶತ್ರು ಮಿತ್ರರಲ್ಲಿ ಸಮಭಾವ, ಕರುಣೆ, ದಾನ ಇವು ಮುಮುಕ್ಷುವು ಆಚರಿಸಬೇಕಾದ ಆದ್ಯಕರ್ತವ್ಯಗಳು. ಶತ್ರುಗಳಿಗೂ ಕೂಡ ಹಿತ ಬಯಸಬೇಕು, ಶತ್ರು ಮಿತ್ರರೊಡನೆ ಸಮಭಾವದಿಂದ ವರ್ತಿಸ ಬೇಕು ಎಂದು ಹೇಳಿರುವುದು ಗಮನಾರ್ಹ. ಇಲ್ಲಿ ಬೋಧಿಸಿರುವ ಕರ್ಮವು ಭಗವದ್ಗೀತೆಯ ಕರ್ಮ ಬೋಧಿಸಿರುವ ಕರ್ಮಯೋಗ ವನ್ನು ಹೋಲುತ್ತದೆ. ಜ್ಞಾನಯೋಗಕ್ಕೆ ಕರ್ಮಯೋಗ ಅಗತ್ಯ ವೆಂಬುದು ಗಮನಾರ್ಹವಾದ ವಿಷಯ.

ಜ್ಞಾನಾಖ್ಯ ಪರಮಜ್ಞಾನ ಸಿದ್ಧಿ. ಜ್ಞಾತೃ, ಜ್ಞಾನ, ಜ್ಞೇಯ, ಒಂದೇ. ಭಿನ್ನವಾದ ಎಲ್ಲವೂ ಏಕತೆಯಿಂದ ಕೂಡಿವೆ ಎಂಬ ತಿಳಿವೇ ಪರಬ್ರಹ್ಮ ಜ್ಞಾನ. ಆ ಜ್ಞಾನ ತರ್ಕದಿಂದ ಪಡೆಯಲಾಗದ ಜ್ಞಾನ. ಅದನ್ನು ಮಾತಿನ ಮೂಲಕ ವರ್ಣಿಸಲಾಗುವುದಿಲ್ಲ. ಪರಮಜ್ಞಾನ ನಿರ್ವಾಣರೂಪವಾದದ್ದು. ಜ್ಞಾನಯೋಗದಿಂದ ಮಾತ್ರ ಇದು ಸಿದ್ಧಿಸುತ್ತದೆ.

ಜಯಾಖ್ಯ ತಿಳಿಸುವ ಯೋಗ ಎರಡು ಬಗೆಯಾದದ್ದು. ಒಂದು ಮಂತ್ರಧ್ಯಾನ, ಎರಡನೆಯದು ಯೋಗಾಭ್ಯಾಸ; ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ ಅದರ ಹಂತಗಳು.

ಜಯಾಖ್ಯಯೋಗವನ್ನು ಸಕಲ, ನಿಷ್ಕಲ, ಶಬ್ದ ಎಂದು ಇನ್ನೊಂದು ಬಗೆಯಾಗಿಯೂ ವಿಂಗಡಿಸಿದೆ. **ಸಕಲ** ಅಥವಾ ವಿಗ್ರಹ ಯೋಗ, ವಿಗ್ರಹಗಳ ಮೂಲಕ ಧ್ಯಾನ ಮಾಡುವುದು. ವಿಷ್ಣುವಿನ ವಿಗ್ರಹದಲ್ಲಿ ಮನಸ್ಸನ್ನು ಕೂಡಿಸುವುದು. ಇದು ಮೊದಲ ಹಂತ.

ಇವರಿಂದ ಏಕಾಗ್ರತೆ ಸಿದ್ಧಿಸಿದಾಗ ಮನಸ್ಸನ್ನು ಹೊಳೆಯುವ ಚಕ್ರದಲ್ಲಿ ನಿಲ್ಲಿಸುವುದನ್ನು ಅಭ್ಯಾಸಿಸುವುದು ಎರಡನೆಯ ಹಂತ. ಒಂದು ಬಟಾಣಿ ಬೀಜದಷ್ಟು ಸಣ್ಣದರಲ್ಲಿ ಮನಸ್ಸನ್ನು ನಿಲ್ಲಿಸುವುದು ಮೂರನೆಯ ಅಂಶ. ಕೂದಲ ಎಳೆಯಷ್ಟು ಸಣ್ಣದರಲ್ಲಿ ಮನಸ್ಸನ್ನು ಕೇಂದ್ರಿಸುವುದು ನಾಲ್ಕನೆಯ ಹಂತ. ಹೀಗೆ ಅತ್ಯಂತ ಸಣ್ಣ ವಸ್ತುಗಳಲ್ಲಿ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸುವುದನ್ನು ಅಭ್ಯಸಿಸಿದಾಗ ಅವನ ಬ್ರಹ್ಮರಂಧ್ರ ತೆರೆದು ಅವನಿಗೆ ಭಗವಂತನ ಸಾಕ್ಷಾತ್ಕಾರವಾಗುತ್ತದೆ.

**ಮಂತ್ರಯೋಗ.** ಪಂಚರಾತ್ರಾಗಮಕ್ಕೆ ವಿಶಿಷ್ಟವಾದ ಮಂತ್ರಗಳ ಮೂಲಕ ಭಗವಂತನನ್ನು ಧ್ಯಾನಿಸುವುದು ಶಬ್ದವೆಂಬ ಯೋಗ. ತನ್ನ ಆತ್ಮದ ಸತ್ತ್ವ ಬ್ರಹ್ಮವೇ ಎಂದು ಬ್ರಹ್ಮದಲ್ಲಿ ಮನಸ್ಸನ್ನು ನಿಲ್ಲಿಸುವುದು ನಿಷ್ಕಲವೆಂಬ ಯೋಗ. ಎಲ್ಲ ಯೋಗಗಳನ್ನು ಒಟ್ಟಾಗಿ ಭಾಗವತ ಯೋಗಗಳೆಂದು ಕರೆಯಬಹುದು.

## ಅಹಿರ್‌ಬುಧ್ನ್ಯ ಸಂಹಿತೆ

ಜಯಾಖ್ಯ ಸಂಹಿತದ ಏಕತ್ತ್ವವೂ ಅಹಿರ್‌ಬುಧ್ನ್ಯ ಸಂಹಿತದ ತತ್ತ್ವ ಒಂದೇ. ಅಲ್ಲಿ ಬೋಧಿಸುವವನು ಶಾಂಡಿಲ್ಯ. ಇಲ್ಲಿ ಬೋಧಿಸುವವನು ಅಹಿರ್‌ಬುಧ್ನ್ಯ. ಅವನು ಈ ತತ್ತ್ವವನ್ನು ಬಹುಕಾಲ ತಪಸ್ಸುಮಾಡಿ ಸಂಕರ್ಷಣನಿಂದ ನೇರವಾಗಿ ಪಡೆದನೆಂದು ಅಹಿರ್‌ಬುಧ್ನ್ಯ ಸಂಹಿತೆಯ ಆರಂಭದಲ್ಲಿ ತಿಳಿಸಿರುತ್ತಾನೆ. ಅದರ ಮೂರನೆಯ ಅಧ್ಯಾಯದಲ್ಲಿ ಅವನು ಪಡೆದ ತತ್ತ್ವಕ್ಕೆ ಸುದರ್ಶನ ತತ್ತ್ವವೆಂದೂ ಅದು ಎಲ್ಲಕ್ಕೂ ಆಧಾರವೆಂದೂ ; ಅದರಿಂದ ಎಲ್ಲ ಸಂಶಯಗಳೂ ಬಿಟ್ಟುಹೋಗುತ್ತವೆ ಎಂದೂ ಹೇಳುತ್ತಾನೆ. ಸುದರ್ಶನಸ್ವರೂಪಂ ತತ್ ಪ್ರೋಚ್ಯಮಾನಂ ಮಯಾ ಶೃಣು। ಶ್ರುತೇ ಯತ್ರಾಖಿಲಾಧಾರೇ ಸಂಶಯಾಃ ತೇ ನ ಸಂತಿ ವೈ॥ iii.2.5.). ಪರಸತ್ ಅನಾದಿ, ಮತ್ತು

ಅನಂತ; ನಾನು ರೂಪಗಳಲ್ಲಿನ್ನು; ಅದು ಮಾತಿಗೂ ಮನಸ್ಸಿಗೂ ನಿಲುಕದ್ದು. ಸರ್ವ ಶಕ್ತಿಯುಳ್ಳ ಇದು ಬದಲಾವಣೆ ಇಲ್ಲದ್ದು. ಈ ಪರಸತ್ತ್ವನಿಂದ ತಾನೇ ತಾನಾಗಿ ಸಂಕಲ್ಪ ಹೊರಹೊಮ್ಮುತ್ತದೆ. ಈ ಸಂಕಲ್ಪ ಕಾಲ ದೇಶ ದ್ರವ್ಯಗಳಿಂದ ಸೀಮಿತವಾದದ್ದಲ್ಲ (ನಿಃಸೀಮ) ಈ ಬ್ರಹ್ಮಸುಖಾನುಭವ ಸ್ವರೂಪ. ಅವನು ಸರ್ವವ್ಯಾಪಕ, ಅವನು ಅಲೆಗಳಿಲ್ಲದ ಸಮುದ್ರದಂತೆ ಶಾಂತ. ಅವನನ್ನು 'ಅದು' 'ಇಂಥಾದ್ದು' ಎಂಬ ಮಾತುಗಳಿಂದ ವರ್ಣಿಸುವುದಕ್ಕಾಗುವುದಿಲ್ಲ. ಅವನು ಶುದ್ಧ ಜ್ಞಾನಸ್ವರೂಪ. ಆದರೂ ಜ್ಞಾನ ಅವನ ಗುಣಗಳಲ್ಲಿ ಮೊದಲನೆಯ ದೆಂದು ಹೇಳುತ್ತಾರೆ. ಅಜಡಂ ಸ್ವಾತ್ಮಸಂಬೋಧಿ ನಿತ್ಯಂ ಸರ್ವಾವ-ಗಾಹನಮ್। ಜ್ಞಾನಂ ನಾಮ ಗುಣಂ ಪ್ರಾಹುಃ ಪ್ರಥಮಂ ಗುಣ-ಚಿಂತಕಾಃ । ಸ್ವರೂಪಂ ಬ್ರಹ್ಮಣಃ ತಚ್ಚ ಗುಣೈಶ್ಚ ಪರಿಗೀಯತೇ : iii. 2. 53) ಶಕ್ತಿ, ಐಶ್ವರ್ಯ, ಬಲ, ವೀರ್ಯ, ತೇಜಸ್ ಅವನ ಜ್ಞಾನ ಸತ್ತ್ವದ ಐದು ರೂಪಗಳು. ಜಗತ್ತಿನ ಸೃಷ್ಟಿಗೆ ಕಾರಣವಾದದ್ದನ್ನು 'ಶಕ್ತಿ' ಎಂಬ ಪಾರಿಭಾಷಿಕ ಪದದಿಂದ ನಿರ್ದೇ ಶಿಸಲ್ಪಟ್ಟಿದೆ. ಜಗತ್ ಪ್ರಕೃತಿಭಾವೋ ಯಃ ಸಾ ಶಕ್ತಿಃ ಪರಿ-ಕೀರ್ತಿತಾ (iii. 2. 57.) ಐಶ್ವರ್ಯ ಎಂಬ ಪದ ಕರ್ತೃತ್ವ ಸೂಚಕ. ಬಲ ಎಂದರೆ ಆಯಾಸವಿಲ್ಲದ ಯತ್ನ. ವೀರ್ಯ ವಿಶ್ವದ ಉಪಾದಾನಕಾರಣ. ತನ್ನಿಂದಲೇ ಜಗತ್ತನ್ನು ಸೃಷ್ಟಿಸಿ ದರೂ ಅವನು ಬದಲಾಯಿಸದೆ ಇರುತ್ತಾನೆ. ತೇಜಸ್ ಬೇರೆ ಯಾವುದರ ಸಹಾಯವಿಲ್ಲದೆ ಕರಣವಿಲ್ಲದೆ ನಿರ್ಮಿಸುವ ಗುಣ. ಶುದ್ಧಜ್ಞಾನ ಸತ್ತ್ವವಾದ ಬ್ರಹ್ಮನು ವಿಶ್ವಸೃಷ್ಟಿಯನ್ನು ಸಂಕಲ್ಪಿ ಸಿದಾಗ ಅವನು ಸುದರ್ಶನನಾಗುತ್ತಾನೆ.

ವಿಶ್ವಕ್ಕೂ ಬ್ರಹ್ಮಕ್ಕೂ ಇರುವ ಸಂಬಂಧ "ಅಪೃಥಕ್"

ಸಂಬಂಧ. ಅಪೃಥಕ್ ಎಂದರೆ ಎಡೆಬಿಡದೆ ಇರುವುದು. ಜಗತ್ತಿನಲ್ಲಿರುವ ಎಲ್ಲವೂ ಅವನ ಸತ್ತ್ವದ ಅಂಶಗಳು. ಅವು ಅವನಲ್ಲಿ ಸೂಕ್ಷ್ಮಾವಸ್ಥೆಯಲ್ಲಿ ಇರುತ್ತವೆ. ಆ ಸತ್ತ್ವವನ್ನು ಬಿಟ್ಟು ಅವಕ್ಕೆ ಅಸ್ತಿತ್ವವಿಲ್ಲ. **ಸೂಕ್ಷ್ಮಾವಸ್ಥೆಯಲ್ಲಿ** ಅವುಗಳನ್ನು ತಿಳಿಯಲಾಗುವುದಿಲ್ಲ. ಅವು ಕಾಣುವುದು ಕಾರ್ಯರೂಪದಲ್ಲೇ. ಪರಮಾತ್ಮನ ಶಕ್ತಿಯನ್ನು ಅಹಿರ್‌ಬುಧ್ನ್ಯ ಸಂಹಿತೆ ಬಹು ಪ್ರಕಾರವಾಗಿ ವರ್ಣಿಸುತ್ತದೆ. (ಶಕ್ತಯಃ ಸರ್ವಭಾವಾನಾಂ ಅಚಿಂತ್ಯಾ ಅಪೃಥಕ್ ಸ್ಥಿತಾಃ। ಸ್ವರೂಪೇನೈವ ದೃಶ್ಯಂತೇ ಕಾರ್ಯತಃ ತು ತತಃ। ಸೂಕ್ಷ್ಮಾವಸ್ಥಾಹಿ ಸಾ ತೇಷಾಂ ಸರ್ವಭಾವಾನುಗಾಮಿನೀ । ಇದಂ ತಯಾ ವಿಧಾತುಂ ಸಾ ನ ನಿಷೇದ್ಧುಂ ಚ ಶಕ್ಯತೇ।। iii.2.3.) ಅದು ನಿರಪೇಕ್ಷತಯಾನಂದ, ನಿತ್ಯ ಪೂರ್ಣ.ಆ ಶಕ್ತಿಗೆ ಲಕ್ಷ್ಮೀ ಎಂದು ಹೆಸರು(ಜಗತ್ತಯಾ ಲಕ್ಷ್ಯಮಾಣಾ ಸಾ ಲಕ್ಷ್ಮೀರ್ ಇತಿ ಗೀಯತೇ iii.9.) ಅದು ವಿಶ್ವರೂಪದಲ್ಲಿ ಸಂಕುಚಿತವಾಗುವುದರಿಂದ ಅದನ್ನು ಕುಂಡಲಿನೀ ಎಂದು ಕರೆಯುತ್ತಾರೆ. ಆ ಶಕ್ತಿ ಬ್ರಹ್ಮದಿಂದ ಭಿನ್ನ. ಆದರೂ ಅದರೊಡನೆ ಒಂದಾಗಿ ಉನ್ಮೇಷಗೊಳ್ಳುತ್ತದೆ. (ಉನ್ಮೇಷೋ ಯಃ ಸುಸಂಕಲ್ಪಃ ಸರ್ವತ್ರಾವ್ಯಾಹತಃ ಕೃತೌ। ಅವ್ಯಕ್ತಕಾಲಪುಂರೂಪಂ ಚೇತನಾಚೇತನಾತ್ಮಕಂ (iii,30.31) ಬ್ರಹ್ಮನ ಶಕ್ತಿ ಅವ್ಯಕ್ತ, ಕಾಲ ಮತ್ತು ಪುರುಷರೂಪವಾಗಿ ತೋರಿಸಿಕೊಳ್ಳುತ್ತದೆ. ಆ ಶಕ್ತಿ "ನಿರಪೇಕ್ಷತಯಾನಂದ", ಕಾರ್ಯರೂಪವಾಗಬಲ್ಲ ಇಚ್ಛಾಜ್ಞಾನರೂಪ( ಸ್ವಾತಂತ್ರ್ಯ ಮೂಲ ಇಚ್ಛಾತ್ಮಾ ಪ್ರೇಕ್ಷರೂಪಃ ಕ್ರಿಯಾಫಲಃ (iii.30) ಅದು ಪ್ರಕೃತಿಯನ್ನು ಪರಿಣಾಮಗೊಳ್ಳುವಂತೆಯೂ ಪುರುಷರನ್ನು ಪ್ರಕೃತಿಯ ಪರಿಣಾಮಗಳನ್ನು ಅನುಭವಿಸುವಂತೆಯೂ ಪ್ರೇರಿಸುತ್ತದೆ. ಪ್ರಕೃತಿಯು ಪರಿಣಾಮಗೊಳ್ಳುವುದು ಆ ಶಕ್ತಿಯ

ಪ್ರೇರಣೆಯಿಂದ. ಆ ಪ್ರೇರಣೆಯನ್ನು ಹಿಂದಕ್ಕೆ ತೆಗೆದುಕೊಂಡಾಗ ಪ್ರಳಯ ಉಂಟಾಗುತ್ತದೆ. ಸುದರ್ಶನವೆಂಬ ಸಂಕಲ್ಪ ಸ್ಪಂದರೂಪ ವಾದದ್ದು. ಅದು ಬಹುರೂಪಗಳಾಗಿ ವಿಭಜನೆಯಾಗಿ ಅನೇಕ ಭಾಗಗಳಲ್ಲಿ ಸ್ಥಾಪಿತವಾಗಿರುತ್ತದೆ. ಸೋಽಯಂ ಸುದರ್ಶನಂ ನಾಮ ಸಂಕಲ್ಪಃ ಸ್ಪಂದನಾತ್ಮಕಃ। ವಿಭಾಜ್ಯ ಬಹುಧಾರೂಪಂ ಭಾವೇ ಭಾವೇಽವತಿಷ್ಠತೇ (iii.39) ಕಾಶ್ಮೀರ ಶೈವವು ಬಹುಶಃ ಸ್ಪಂದ ಭಾವನೆಯನ್ನು ಇದರಿಂದ ಪಡೆದಿರಬಹುದು.

ಮೂಲ ಸ್ಥಿತಿಯಲ್ಲಿ ಈ ವಿಶ್ವವೆಲ್ಲ ಆ ಶಕ್ತಿಯಲ್ಲಿ ಸುಷುಪ್ತಿ ಸ್ಥಿತಿಯಲ್ಲಿರುತ್ತವೆ. ಆಗ ಗುಣಗಳು ಸಮಸ್ಥಿತಿಯಲ್ಲಿರುತ್ತವೆ. ಆ ಸ್ಥಿತಿಯನ್ನು ಶೂನ್ಯತ್ವ ರೂಪವೆಂದು ಕರೆದಿರುತ್ತಾರೆ. ಈ ಶಕ್ತಿ ಕ್ರಿಯಾ. ಬಲ, ವೀರ್ಯ, ತೇಜಸ್, ಜ್ಞೇಯ, ಜ್ಞಾತೃ ರೂಪಗಳಾಗಿ ಆವಿರ್ಭವಿಸುತ್ತದೆ.

3 ಅಹಿರ್ಬುಧ್ನ್ಯ ಸಂಹಿತೆ ಭಗವಂತನ ವ್ಯೂಹಗಳನ್ನು ಅವಕಾಶಗಳನ್ನೂ ವಿಸ್ತರವಾಗಿ ವರ್ಣಿಸಿದೆ. ಜಯಾಖ್ಯ ಸಂಹಿತೆಯಲ್ಲಿ ಈ ವಿವರಗಳಿಲ್ಲ. ಭಗವಂತನ ನಿರಂತರ ಜ್ಞಾನ ಮತ್ತು ಬಲಗಳಿಂದ ಸಂಕರ್ಷಣ ರೂಪ ಹುಟ್ಟುತ್ತದೆ. ಅವನ ಐಶ್ವರ್ಯ ಮತ್ತು ವೀರ್ಯಗಳಿಂದ ಪ್ರದ್ಯುಮ್ನರೂಪ ಹುಟ್ಟುತ್ತದೆ. ಅವನ ಶಕ್ತಿ ಮತ್ತು ತೇಜಸ್ಸುಗಳಿಂದ ಅನಿರುದ್ಧ ರೂಪ ಹುಟ್ಟುತ್ತದೆ. ಭಗವಂತನ ಈ ರೂಪಗಳಿಗೆ ವ್ಯೂಹಗಳೆಂದು ಹೆಸರು. ಈ ಎರಡೆರಡು ಗುಣಗಳು ಒಂದೊಂದು ವ್ಯೂಹರೂಪದಲ್ಲೂ ಪ್ರಧಾನವಾಗಿದ್ದರೂ ಈ ವ್ಯೂಹಗಳು ವಿಷ್ಣುವಿನ ರೂಪಗಳೇ ಆದ್ದರಿಂದ ಇತರ ಗುಣಗಳೂ ಗೌಣವಾಗಿ ಆ ವ್ಯೂಹರೂಪಗಳಲ್ಲಿರುತ್ತವೆ. ಮೊದಲನೆಯ ವ್ಯೂಹ ಹುಟ್ಟಿದ ಒಂದು ಸಾವಿರ ಆರನೂರು ವರ್ಷಗಳ ತರುವಾಯ ಎರಡ

ನೆಯ ವ್ಯೂಹ ಹುಟ್ಟಿತು. ಹಾಗೆಯೇ ಎರಡನೆಯ ವ್ಯೂಹ ಹುಟ್ಟಿದ ಒಂದು ಸಾವಿರದ ಆರನೂರ ವರ್ಷಗಳನಂತರ ಮೂರನೆಯ ವ್ಯೂಹ ಹುಟ್ಟಿತು. ಕೆಲವು ಕಡೆ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ನಾಲ್ಕು ವ್ಯೂಹಗಳನ್ನು ವರ್ಣಿಸಿದೆ.

ಈ ನಾಲ್ಕು ಮೂಲ ವ್ಯೂಹರೂಪಗಳಲ್ಲಿ ಒಂದೊಂದೂ ಮೂರು ಉಪ ರೂಪಗಳನ್ನು ಪಡೆದಿರುತ್ತದೆ. ವಾಸುದೇವನ ಉಪರೂಪಗಳು ಕೇಶವ. ನಾರಾಯಣ ಮತ್ತು ಮಾಧವ. ಸಂಕರ್ಷಣನ ಉಪರೂಪಗಳು ಗೋವಿಂದ, ವಿಷ್ಣು, ಮಧುಸೂಧನ. ಪ್ರದ್ಯುಮ್ನನ ಉಪರೂಪಗಳು ತ್ರಿವಿಕ್ರಮ, ವಾಮನ, ಶ್ರೀಧರ. ಅನಿರುದ್ಧನ ಉಪರೂಪಗಳು ಹೃಷೀಕೇಶ, ಪದ್ಮನಾಭ ಮತ್ತು ದಾಮೋದರ. ಈ ಹನ್ನೆರಡು ಉಪರೂಪಗಳು ವರ್ಷದ ಹನ್ನೆರಡು ತಿಂಗಳುಗಳ ಅಧಿದೇವತೆಗಳು ; ಅವುಗಳನ್ನೂ ಹನ್ನೆರಡು ಬಗೆಯ ಆದಿತ್ಯರೂಪಗಳೆಂದು ಭಾವಿಸುವುದೂ ಉಂಟು. ಆಚಮನ ಮಾಡುವಾಗ ಕೇಶವಾಯ ಸ್ವಾಹಾ, ನಾರಾಯಣಾಯ ಸ್ವಾಹಾ, ಮಾಧವಾಯ ಸ್ವಾಹಾ ಎಂದು ಹೇಳುವುದು ರೂಢಿಯಲ್ಲಿದೆ. ಹಾಗೆಯೇ ಪೂಜೆ ಮಾಡುವಾಗಲೂ ನಮಸ್ಕಾರ ಮಾಡುವಾಗಲೂ ಈ ಹನ್ನೆರಡು ನಾಮೋಚ್ಚಾರಣೆ ರೂಢಿಯಲ್ಲಿದೆ. ಈ ಹನ್ನೆರಡನ್ನು ಧ್ಯಾನರೂಪಗಳೆಂದು ಭಾವಿಸಲಾಗಿದೆ.

ಈ ಹನ್ನೆರಡು ಉಪವ್ಯೂಹರೂಪಗಳನ್ನಲ್ಲದೆ ಅಹಿರ್ಬುಧ್ನ್ಯ ಮೂವತ್ತೊಂಭತ್ತು ವಿಭವಾವತಾರಗಳನ್ನೂ ತಿಳಿಸುತ್ತದೆ. ಭಗವಂತನನ್ನು ಬಿಟ್ಟಿರಲಾರದ ಸಾಧುಗಳ ಸಲುವಾಗಿ ಭಗವಂತನು ಅವರ ರಕ್ಷಣೆಗಾಗಿ (ಪರಿತ್ರಾಣಾಯ) ಸದಾ ಕಾವಲಾಗಿ ಈ ಯಾವುದಾದರೂ ಒಂದು ರೂಪದಲ್ಲಿ ಅವರ ಬಳಿ ಕುಳಿತಿರುತ್ತಾನೆ. ಪದ್ಮನಾಭ, ಧ್ರುವ, ಅನಂತ, ಸತ್ಯಾತ್ಮ, ಮಧುಸೂಧನ, ವಿದ್ಯಾಧಿ

ದೇವ, ಕಪಿಲ, ವಿಶ್ವರೂಪ, ವಿಹಂಗಮ, ಕ್ರೋಧಾತ್ಮನ್, ವಡವಾವಕ್ತ್ರ, ಧರ್ಮ, ವಾಗೀಶ್ವರ, ಏಕಾರ್ಣವಶಾಯಿನ್. ಕಮಠೇಶ್ವರ ವರಾಹ, ನರಸಿಂಹ, ಪೀಯೂಷಾರ್ಣ, ಶ್ರೀಪತಿ, ಕಾಂತಾತ್ಮನ್ ರಾಹುಜಿತ್, ಕಾಲನೇಮಿಘ್ನ, ಪಾರಿಜಾತಹರ, ಲೋಕನಾಥ, ಶಾಂತಾತ್ಮನ್, ದತ್ತಾತ್ರೇಯ, ನ್ಯಗ್ರೋಧಶಾಯಿನ್, ಏಕಶೃಂಗತನು, ವಾಮದೇವ, ತ್ರಿವಿಕ್ರಮ, ನರ, ನಾರಾಯಣ, ಹರಿ, ಕೃಷ್ಣ ಪರಶುರಾಮ, ರಾಮ, ವೇದವಿದ್, ಕಲ್ಕಿನ್, ಪಾತಾಳಶಯನ. ಈ ಮೂವತ್ತೊಂಭತ್ತು ವಿಭವಾಕಾರಗಳಲ್ಲಿ ದಶಾವತಾರಗಳಲ್ಲಿ ಹೇಳಿರುವ ಕೆಲವು ಹೆಸರುಗಳು ಸೇರಿವೆ.

ವ್ಯೂಹ ಮತ್ತು ಅವತಾರ ಭಾವನೆ ಭಾಗವತ ಪಂಥಕ್ಕೇ ವಿಶಿಷ್ಟವಾದ ಭಾವನೆ. ಭಗವಂತನು ಭಕ್ತರೊಡನೆ ನಾನಾ ವಿಧವಾಗಿ ನಿರಂತರವಾಗಿ ಸಂಪರ್ಕವಿಟ್ಟುಕೊಂಡಿರುತ್ತಾನೆ ಎಂಬ ಭಾವನೆಯನ್ನು ಒತ್ತಿ ಹೇಳುವುದಕ್ಕಾಗಿ ಈ ಅವತಾರ ಭಾವನೆ ಭಾಗವತ ಮತದಲ್ಲಿ ಎದ್ದು ಕಾಣುತ್ತದೆ. ಈ ವಿಭವಾವತಾರವನ್ನೂ ಸೇರಿಸಿ ಅಹಿರ್‌ಬುಧ್ನ್ಯ ಸಂಹಿತ ಅವತಾರಗಳನ್ನು ನಾಲ್ಕು ಬಗೆಯಾಗಿ ವಿಂಗಡಿಸಿದೆ. ವಿಭವಾವತಾರ, ಆವೇಶಾವತಾರ, ಅರ್ಚಾವತಾರ, ಅಂತರ್ಯಾಮಿ ಅವತಾರ—ಇವು ಆ ನಾಲ್ಕು ಅವತಾರಗಳು. ಆವೇಶಾವತಾರಗಳು ಸ್ವರೂಪಾವೇಶ, ಶಕ್ತ್ಯಾವೇಶ ಎಂದು ಎರಡು ಬಗೆಯಾಗಿವೆ. ಪರಶುರಾಮ, ರಾಮ, ಕೃಷ್ಣ, ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಮುಂತಾದ ದಶಾವತಾರಗಳು. ಬ್ರಹ್ಮ, ವಿಷ್ಣು, ಶಿವ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳಿಗಾಗಿ ಭಗವಂತನಿಂದ ನಿಯೋಜಿತವಾದ ಅವತಾರಗಳು. ಪರಮ ಮುಕ್ತಿಯನ್ನು ಪಡೆಯಲು ಬಯಸುವವರು ಭಗವಂತನ ಸಾಕ್ಷಾತ್ ಅವತಾರಗಳನ್ನು

ಉಪಾಸಿಸಬೇಕು. ಈ ಸಾಕ್ಷಾತ್ ಅವತಾರಗಳು ನೇರವಾಗಿ ಭಗವಂತನಿಗೆ ಸಂಬಂಧಪಟ್ಟವು. ಒಂದು ದೀಪದಿಂದ ಇನ್ನೊಂದು ದೀಪ ಹತ್ತಿ ಕೊಳ್ಳುವಂತೆ ಭಗವಂತನ ತೇಜಸ್ಸಿನಿಂದ ನೇರವಾಗಿ ಬಂದ ಅತೀತ ರೂಪಗಳು ಸಾಕ್ಷಾತ್ ಅವತಾರಗಳು.

ಜೀವಾತ್ಮನಲ್ಲಿ ಅಂತರ್ಯಾಮಿಯಾಗಿರುವ ಭಗವಂತನ ಅಂಶರೂಪ ಅಂತರ್ಯಾಮಿ ಅವತಾರ. ಅಂತರ್ಯಾಮಿಯಾದ ಭಗವಂತನು ಜೀವರುಗಳಲ್ಲಿ ಭಕ್ತಿ ಹುಟ್ಟಿಸಿ ತನ್ಮೂಲಕ ಅವರಿಗೆ ಶ್ರೇಯಸ್ಸನ್ನುಂಟುಮಾಡುತ್ತಾನೆ. ಈ ಅಂತರ್ಯಾಮಿ ಭಾವನೆ ಶ್ರೀವೈಷ್ಣವ. ವೈಷ್ಣವ, ಶೈವ ಎಲ್ಲ ಪಂಥಗಳಿಗೂ ಸಾಮಾನ್ಯವಾದ ಭಾವನೆ.

ಪೂಜಾರ್ಥವಾಗಿ ಜೀವರುಗಳಿಗೆ ವಿಗ್ರಹರೂಪದಲ್ಲಿ ಕಾಣಿಸಿ ಕೊಳ್ಳುವ ರೂಪ ಅರ್ಚಾವತಾರ. ವಿಗ್ರಹಗಳನ್ನು ಭಾವಿಸಿ ಅವುಗಳನ್ನು ರಚಿಸುವ ವಿಧಾನವನ್ನು ಅವುಗಳನ್ನು ಪ್ರತಿಷ್ಠೆ ಮಾಡಿ ಪೂಜಿಸುವ ವಿಧಾನಗಳನ್ನೂ ಅಹಿರ್‌ಬುಧ್ನ್ಯ ಸಂಹಿತೆಯಲ್ಲದೆ ಇತರ ಸಂಹಿತೆಗಳೂ ವಿಸ್ತಾರವಾಗಿ ವರ್ಣಿಸುತ್ತವೆ. ವಿಗ್ರಹಪೂಜೆಯಿಂದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳುವ ವಿಧಾನವನ್ನು ಜಯಾಖ್ಯದ ತತ್ತ್ವಭಾಗದಲ್ಲಿ ಈಗಾಗಲೇ ವರ್ಣಿಸಿದೆ.

ಭಗವಂತನ ವ್ಯೂಹ ಮತ್ತು ಅವತಾರ ರೂಪಗಳಂತೆಯೇ ಅಹಿರ್‌ಬುಧ್ನ್ಯ ಸಂಹಿತೆಯೂ ವಿಹಗೇಂದ್ರ ಸಂಹಿತೆಯೂ ಶಕ್ತಿಯ ಮೂರು ರೂಪಗಳನ್ನು ವರ್ಣಿಸುತ್ತವೆ. ಭಗವಂತನು ಪರಮಸ್ಥಿತಿಯಲ್ಲಿ ಲಕ್ಷ್ಮೀ ಅಥವಾ ಶ್ರೀಶಕ್ತಿಯಿಂದ ಕೂಡಿರುತ್ತಾನೆ. ತತ್ತ್ವತ್ರಯವು ಭಗವಂತ ಮೂವರು ಹೆಂಡತಿಯರನ್ನು ವಿವರಿಸುತ್ತದೆ. ಅವರು ಲಕ್ಷ್ಮೀ, ಭೂಮಿ ಮತ್ತು ನೀಲಾ. ಈ ಮೂವರು

ಭಗವಂತನ ಇಚ್ಛಾ, ಜ್ಞಾನ ಮತ್ತು ಕ್ರಿಯಾರೂಪಗಳು. ಸಾತ್ವತ ಸಂಹಿತೆ ಹನ್ನೆರಡು ಶಕ್ತಿರೂಪಗಳನ್ನು ವಿವರಿಸುತ್ತದೆ. ಲಕ್ಷ್ಮೀ, ಪುಷ್ಟಿರ್, ದಯಾ, ನಿದ್ರಾ, ಕ್ಷಮಾ, ಕಾಂತಿರ್, ಸರಸ್ವತೀ. ಧೃತಿರ್ ಮೈತ್ರೀ, ರತಿಃ,ತೃಷ್ಟಿರ್, ಮತಿರ್ ದ್ವಾದಶಾಮಿಾ ಸ್ಮೃತಾ(ix.85)

ಅಹಿರ್ಬುಧ್ನ್ಯ ಮಧ್ಯಸೃಷ್ಟಿಯನ್ನು ವಿವರಿಸುತ್ತ ಶಕ್ತಿಯು ಭಗವಂತನಿಂದ ಅಭಿನ್ನ ಮತ್ತು ಭಿನ್ನ ಎಂದು ತಿಳಿಸುತ್ತದೆ. ಭಗವಂತ ಮತ್ತು ಶಕ್ತಿ ಎರಡೂ ಸೇರಿ ಸೃಷ್ಟಿಗೆ ಕಾರಣಗಳು. ವ್ಯೂಹ ಮತ್ತು ವಿಭವಾಕಾರಗಳು ಶುದ್ಧ ಆದಿಸೃಷ್ಟಿ. ಈ ವ್ಯೂಹ ವಿಭವಗಳಿಂದ ಶುದ್ಧೇತರ ಮಧ್ಯಸೃಷ್ಟಿ ಪರಿಣಮಿಸುತ್ತದೆ. ಅಶುದ್ಧ ಸೃಷ್ಟಿ ಪುರುಷ, ಗುಣ, ಕಾಲ ರೂಪಗಳಲ್ಲಿವೆ. ಪುರುಷನು ನಾಲ್ಕು ಜಾತಿಯ ಸ್ತ್ರೀ ಮತ್ತು ಪುಂ ಸಂಗಡಿಜೀವಿಗಳ ಸಮುದಾಯ. ಆ ನಾಲ್ಕು ಜೊತೆಗಳು ಪ್ರದ್ಯುಮ್ನನ ಮುಖ, ಎದೆ, ತೊಡೆ ಮತ್ತು ಪಾದಗಳಿಂದ ಹುಟ್ಟುತ್ತವೆ. ಇದು ಪುರುಷಸೂಕ್ತ ವಿವರಣೆಯನ್ನು ಹೋಲುತ್ತದೆ. ಅವನ ಶಿರ, ಹುಬ್ಬು, ಕಿವಿಗಳಿಂದ ಸೂಕ್ಷ್ಮಾವಸ್ಥೆಯ ಕಾಲ ಮತ್ತು ಗುಣಗಳು ಹುಟ್ಟುತ್ತವೆ. ಇವು ಹುಟ್ಟಿದ ಮೇಲೆ ಇವುಗಳ ಬೆಳೆವು ಅನಿರುದ್ಧನಿಗೆ ಸೇರಿದ ಜವಾಬ್ದಾರಿ(ಅಹಿ. hvi. 14). ಸ್ಥೂಲ ಕಾಲ ನಿಯತಿಗಳು ಮತ್ತು ಸತ್ತ್ವ, ರಜಸ್ ಮತ್ತು ತಮಸ್ಸುಗಳು ಪ್ರದ್ಯುಮ್ನವ್ಯೂಹಕ್ಕೆ ಸೇರಿವೆ. ಅನಿರುದ್ಧನು ಜೀವಾತ್ಮರ ಸೃಷ್ಟಿಗೆ ಕಾರಣ, ಇಲ್ಲಿಯ ಪುರುಷ ಸಾಂಖ್ಯಪುರುಷನಲ್ಲ. ಇಲ್ಲಿಯ ಪುರುಷ (ಲೆಬ್ನಿಜ್ ಎಂಬ ಪಾಶ್ಚಾತ್ಯ ತಾತ್ತ್ವಿಕನ ಮೋನಡ್‌ಗಳಂತೆ) ಜೇನು ಗೂಡಿನಂತೆ ಆತ್ಮಗಳ ಸಮೂಹ (ಸರ್ವಾತ್ಮನಾಮ್ ಸಮಷ್ಟಿರ್ಯಾ ಕೋಶೋ ಮಧುಕೃತಾಂ ಇವ, (ಅಹಿ. vi.33). ಅಶುದ್ಧವಾದ ಆತ್ಮಗಳು ಜೀವಾತ್ಮಗಳು. ಶುದ್ಧ ಅಶುದ್ಧ ಸೂಕ್ಷ್ಮ ಸ್ಥಿತಿಯಲ್ಲಿರುವ

ಜೀವಿಗಳಿಗೆ 'ಮನು'ಗಳೆಂಬ ಹೆಸರು ಕೊಟ್ಟಿದೆ. ಅನಿರುದ್ಧನ ಶಕ್ತಿಯಲ್ಲಿ ಇವು ಭ್ರೂಣಾವಸ್ಥೆಯಲ್ಲಿರುತ್ತದೆ. ವಿಷ್ಣುವಿನಿಂದ ಪ್ರೇರಿತವಾಗಿ ಈ ಮನುಗಳು ನಿಯತಿಯಿಂದ ಸೃಷ್ಟಿಯಾದ ಕಾಲವನ್ನು ಪ್ರವೇಶಿಸುತ್ತವೆ. ಆಗ ಅವು ಸತ್ತ್ವ, ರಜಸ್ ಮತ್ತು ತಮೋಗುಣಗಳಿಂದ ಆವರಿಸಲ್ಪಡುತ್ತವೆ. ವಿಷ್ಣು ಸತ್ವಕ್ಕೂ, ಬ್ರಹ್ಮ ರಜಸ್ಸಿಗೂ, ರುದ್ರ ತಮಸ್ಸಿಗೂ ಒಡೆಯರು. ಮನುಗಳು ಈ ಮೂವರ ಪ್ರಭಾವಕ್ಕೆ ಒಳಗಾಗಿ ಹುಟ್ಟಿ ಬಾಳಿ ಅವಸಾನ ಹೊಂದುತ್ತವೆ.

ಪ್ರಕೃತಿ, ಕಾಲ, ಮನುಗಳು—ಈ ಮೂರರ ಸಮುದಾಯ ಮಿಕ್ಕೆಲ್ಲದರ ಸೃಷ್ಟಿಗೆ ಕಾರಣ. ಇಲ್ಲಿಯ ಸೃಷ್ಟಿವಿಧಾನ ಸಾಂಖ್ಯ ತತ್ತ್ವಕ್ಕಿಂತ ಭಿನ್ನವೆಂಬುದನ್ನು ಗಮನಿಸಬೇಕು. ಈ ಮೂವರ ಮೊದಲನೆಯ ಪರಿಣಾಮ ಮಹತ್ ಇದನ್ನು 'ವಿದ್ಯಾ' 'ಗೌಃ' 'ಯುವನೀ' 'ಬ್ರಾಹ್ಮೀ' 'ವಧೂ' 'ವೃದ್ಧಿ' 'ಮತಿ' 'ಮಧು' 'ಅಖ್ಯಾತಿ' 'ಈಶ್ವರ' 'ಪ್ರಜ್ಞಾ' ಎಂಬ ಪಾರಿಭಾಷಿಕ ಪದಗಳಿಂದ ಕರೆದಿದೆ.

ತಮಸ್ ಸತ್ತ್ವ ಮತ್ತು ರಜಸ್ಸುಗಳ ಪ್ರಾಧಾನ್ಯ ಭೇದಗಳಿಂದ ಉನ್ಮೇಷವಾದ ಮಹತ್ತಿನ ಮೂರು ರೂಪಗಳು ಕಾಲ, ಬುದ್ಧಿ ಮತ್ತು ಪ್ರಜ್ಞಾ(ಕಾಲೋ ಬುದ್ಧಿಃ ತಥಾ ಪಜ್ಞಾ ಇತಿ ತ್ರೇಧಾ ಸ ಗೀಯತೇ। ತಮಃ ಸತ್ತ್ವ ರಜೋಭೇದಾತ್ ತತ್ ತದ್ ಉನ್ಮೇಷ ಸಂಜ್ಞಯಾ" (ಅಹಿ. vii. 9). ತಮಸ್ಸು (ಗುರು)ಭಾರವಾದದ್ದು. ಅಂಟುಳ್ಳದ್ದು (ವಿಷ್ಟಂಭನ) ಭ್ರಮೆಗೊಳಿಸುವಂಥಾದ್ದು (ಮೋಹನ) ಮತ್ತು ಜಡ (ಅಪ್ರವೃತ್ತಿಮತ್). ರಜಸ್ ತೀವ್ರತೆಯಿಂದ ಕೂಡಿದ್ದು, ದುಃಖಕ್ಕೆ ಕಾರಣವಾದದ್ದು. ಸತ್ತ್ವ, ಹಗುರ, ಸ್ವಚ್ಛ, ಕೊಳೆ ಇಲ್ಲದ್ದು ಮತ್ತು ಸುಖರೂಪವಾದದ್ದು (ಸತ್ತ್ವಂ ತತ್ರ ಲಘು ಸ್ವಚ್ಛಂ ಗುಣರೂಪಂ ಅನಾಮಯಂ (ಅಹಿ.vi 52).

ಭಗವಂತನ ಪ್ರೇರಣೆಗೆ ಒಳಗಾಗಿ ಮಹತ್ತಿನಿಂದ ಅಹಂಕಾರ ಹುಟ್ಟುತ್ತದೆ. ಅಹಂಕಾರ ಮೂರು ಬಗೆಯಾದದ್ದು—ವೈಕಾರಿಕಾ, ತೈಜಸಾ, ಮತ್ತು ಭೂತಾದಿ. ಸಾಂಖ್ಯ ಈ ಮೂರು ಬಗೆಯ ಅಹಂಕಾರಗಳನ್ನು ತಿಳಿಸುವುದಿಲ್ಲ. ಅಹುಕಾರ ಹುಟ್ಟಿದಾಗ ಮನುಗಳು ಅದರೊಳಕ್ಕೆ ಇಳಿಯುತ್ತಾರೆ. ಅಹಂಕಾರದಿಂದ ಚಿಂತನಾತ್ಮಕ ಇಂದ್ರಿಯವಾದ ಮನಸ್ ಹುಟ್ಟುತ್ತದೆ. ಇದರೊಳಕ್ಕೆ ಇಳಿದಾಗ ಮನುಗಳು ಆಲೋಚನೆಯ ಶಕ್ತಿಯನ್ನು ಪಡೆಯುತ್ತಾರೆ. ತಾಮಸವಾದ ಅಹಂಕಾರದಿಂದ ಶಬ್ದತನ್ಮಾತ್ರವೂ ಅದರಿಂದ ಆಕಾಶವೂ ಹುಟ್ಟುತ್ತವೆ. ಆಗ ಮನುಗಳು ಅದರಲ್ಲಿ ಪ್ರವೇಶಿಸುತ್ತವೆ. ವೈಕಾರಿಕಾ ಅಹಂಕಾರದಿಂದ ವಾಕ್ ಶ್ರೋತ್ರೇಂದ್ರಿಯಗಳು ಹುಟ್ಟುತ್ತವೆ. ಆಗ ಮನುಗಳಿಗೆ ಕೇಳುವ ಮತ್ತು ಮಾತನಾಡುವ ಶಕ್ತಿ ಹುಟ್ಟುತ್ತವೆ. ಭೂತಾದಿಗಳಿಂದ ಸ್ಪರ್ಶೇಂದ್ರಿಯವೂ ವಾಯುವೂ ಹುಟ್ಟುತ್ತವೆ, ರಸನೇಂದ್ರಿಯವೂ ನೀರೂ ಘ್ರಾಣೇಂದ್ರಿಯವೂ ಪೃಥ್ವಿಯೂ, ಕರ್ಮೇಂದ್ರಿಯಗಳೂ ಅವುಗಳಿಗೆ ಸಮಾನಾಂತರವಾದ ವಸ್ತುಗಳೂ ಹುಟ್ಟುತ್ತವೆ. ಮನುಗಳು ಆಯಾ ದಶೆಯಲ್ಲಿ ಆಯಾಯಾ ಇಂದ್ರಿಯಗಳನ್ನು ಪಡೆಯುತ್ತವೆ. ಸಾಂಖ್ಯದಲ್ಲಿ ಇಂದ್ರಿಯಗಳು ಮತ್ತು ಭೂತಾದಿಗಳ ಹುಟ್ಟಿನ ಕ್ರಮ ಈ ರೀತಿಯದಲ್ಲ.

ಹೀಗೆ ಹುಟ್ಟಿದ ಮನುಗಳು ತಮ್ಮ ಪತ್ನಿಯರಲ್ಲಿ ಮಕ್ಕಳನ್ನು ಪಡೆಯುತ್ತಾರೆ. ಹೀಗೆ ಮನುಗಳಿಗೆ ಹುಟ್ಟಿದ ಮಕ್ಕಳು ಮಾನವರು, ಮಾನವರು ಎಂದರೆ ಹೊಸ ಮನುಷ್ಯರು. ಇವರಲ್ಲಿ ವಿವೇಕದಿಂದ ಕರ್ಮಮಾಡಿದವರು ವಿಷ್ಣುಪದವನ್ನು ಪಡೆಯುತ್ತಾರೆ. ಇವರು ನಿಷ್ಕಾಮಕರ್ಮಿಗಳು. ಎಲ್ಲ ಭಾಗವತ ಮತಗ್ರಂಥಗಳೂ

ಏಕರೀತಿಯಾಗಿ ನಿಷ್ಕಾಮ ಕರ್ಮ ಮುಕ್ತಿಗೆ ಶ್ರೇಷ್ಠ ಮಾರ್ಗ ವೆಂದು ಸಾರುತ್ತವೆ. ಕರ್ಮದಿಂದ, ಧನ, ಅಧಿಕಾರ ಮುಂತಾದ ಲೌಕಿಕ ಫಲಗಳನ್ನು ಬಯಸಿ ಕರ್ಮಮಾಡಿದವರು ಅವರ ಕರ್ಮಾನುಸಾರ ಜನ್ಮಾಂತರಗಳನ್ನು ಪಡೆಯುತ್ತಾರೆ. ಭಗವದ್ಗೀತೆ ವೇದವು ನಿಯಮಿಸಿದ ಕಾಮ್ಯ ಕರ್ಮಗಳನ್ನು ಖಂಡಿಸಿದೆ. ಹಾಗೆಯೇ ವೈಖಾನಸ ಸಂಹಿತೆಯೂ ತತ್ತ್ವತ್ರಯವೂ ಫಲಾಪೇಕ್ಷೆ ಯಿಂದ ಮಾಡುವ ವೈದಿಕ ಯಜ್ಞಗಳನ್ನು ತೀವ್ರವಾಗಿ ಖಂಡಿಸಿದೆ.

ನಿಷ್ಕಾಮ ಕರ್ಮದ ಜೊತೆಗೆ ಶರಣಾಗತಿ ಭಾವಕ್ಕೂ ಭಾಗವತ ಮತ ವಿಶೇಷ ಪ್ರಾಧಾನ್ಯ ಕೊಟ್ಟಿದೆ. ಭಗವಂತನಿಗೆ ಸೃಷ್ಟಿಸುವ ಪೋಷಿಸುವ, ಮತ್ತು ನಾಶಗೊಳಿಸುವ ಶಕ್ತಿಯಲ್ಲದೆ ಅನುಗ್ರಹ ಮತ್ತು ನಿಗ್ರಹವೆಂಬ ಇನ್ನೆರಡು ಶಕ್ತಿಗಳಿವೆ. ಜೀವರುಗಳ ಕರ್ಮಕ್ಕೆ ತಕ್ಕಂತೆ ಸತ್ಕರ್ಮಗಳಿಗೆ ಅನುಗ್ರಹವನ್ನೂ ದುಷ್ಕರ್ಮ ಗಳಿಗೆ ಶಿಕ್ಷೆಯನ್ನೂ ವಿಧಿಸುತ್ತಾನೆ. ಜೀವರುಗಳು ಜ್ಞಾನಮಯ ರಾದರೂ ಭಗವನ್ಮಯರಾದರೂ ವಾಸನಾವಿಶೇಷಗಳಿಂದ ಕವಿದು ಅವರವರಲ್ಲಿರುವ ಅನಂತತೆ ಅಣುರೂಪವಾಗುತ್ತದೆ, ಸರ್ವಶಕ್ತಿ ಉಡುಗಿ ನಿಶ್ಯಕ್ತರಾಗುತ್ತಾರೆ, ಜ್ಞಾನಶಕ್ತಿ ಕುಗ್ಗಿ ಅಜ್ಞಾನಿಗಳಾಗು ತ್ತಾರೆ. ಅಜ್ಞಾನ, ಮಮಕಾರ ಮತ್ತು ಕರ್ಮಗಳ ಪರಿಣಾಮ ವಾಗಿ ಅವರು ಬಂಧಿತರಾಗಿರುತ್ತಾರೆ.

ಈ ಶೋಚನೀಯ ಸ್ಥಿತಿಯಲ್ಲಿರುವ ಜೀವರುಗಳ ಮೇಲೆ ಭಗ ವಂತನು ತನ್ನ ಕೃಪಾಕಟಾಕ್ಷವನ್ನುಬೀರಿದಾಗ ಅವರಿಗೆಭಗವಂತನೇ ಸರ್ವಶಕ್ತ, ತಾವು ಅವನಿಗೆ ಅಧೀನರು ಎಂಬ ಭಾವನೆ ಹುಟ್ಟುತ್ತದೆ. ಅಧೀನಭಾವನೆಗೆ ಶೇಷಶೇಷಿತ ಸಂಬಂಧ ಕಾರಣ. ಜೀವರು ಗಳಲ್ಲಿ ಈ ಅಧೀನಭಾವನೆ ಹುಟ್ಟಿದಾಗ ಅವರಲ್ಲಿ ಶರಣಭಾವ

ಉದಯಿಸುತ್ತದೆ. ಈ ಶರಣಭಾವಕ್ಕೆ 'ನಂತ್ಯ ಸಂತನ್ಯ' ಭಾವ ವೆಂದು ಹೆಸರು. ನಂತ್ಯಭಾವನೆ ಪ್ರಪತ್ತಿ, ಅಂದರೆ ಶರಣಾಗತಿ ಮಾರ್ಗದ ಮೊದಲನೆಯ ಹಂತ. ಉಪಾಧಿರಹಿತೇನಾಯಂ ಯೇನ ಭಾವೇನ ಚೇತನಃ। ನಮತಿ ಜ್ಯಾಯಸೇ ತಸ್ಮೈ ತಜ್ಞಾ ನಮನಮ್ ಉಚ್ಯತೇ॥ (ಅಹಿ. ii.9). ನಾನು ಕೃಪಣ ಎಂಬ ಭಾವ ಪ್ರಪತ್ತಿಯ ಮೊದಲ ಹೊಸ್ತಿಲು. ಭಗವಂತನು ಕರುಣಾಳು (ಮಹಾವಿಶ್ವಾಸಿ) ಎಂಬ ಭಾವನೆ ಪ್ರಪತ್ತಿಯ ಎರಡನೆಯ ಹಂತ. ಭಗವಂತನು ಸರ್ವಶಕ್ತ ಎಂಬ ತಿಳಿವು ಬಲಿತಾಗ ಅವನಲ್ಲಿ ನಮ್ರಭಾವನೆ ಹುಟ್ಟುತ್ತದೆ. ಇದನ್ನು ಪ್ರಾತಿಕೂಲ್ಯ ವಿವರ್ಜನವೆಂದು ಕರೆದಿವೆ. ಇದು ಪ್ರಪತ್ತಿಯ ಮೂರನೆಯ ಹಂತ. ಈ ಲೋಕದಲ್ಲಿ ತನ್ನ ದೆಂಬುದು ಯಾವುದೂ ಇಲ್ಲ. "ನನ್ನ ಶರೀರ, ನನ್ನ ಐಶ್ವರ್ಯ, ಸಂಬಂಧಿಗಳು ನನಗೆ ಸೇರುದುವಲ್ಲ, ಎಲ್ಲವೂ ಭಗವಂತನಿಗೆ ಸೇರಿ ದವು" ಎಂಬ ದೃಢಭಕ್ತಿ ಅಂತಿಮ ಮೆಟ್ಟಿಲು. ತನ್ನನ್ನು ಸಂಪೂರ್ಣ ವಾಗಿ ಭಗವಂತನಿಗೆ ಅರ್ಪಿಸಿಕೊಳ್ಳುವುದಕ್ಕೆ ನ್ಯಾಸ, ಪ್ರಪತ್ತಿ, ಶರಣಾಗತಿ ಎಂಬ ಹೆಸರುಗಳಿವೆ. ಈ ಪ್ರಪತ್ತಿಗಾಗಿಯೇ ಅಹಿರ್ ಬುಧ್ನ್ಯದ ಹದಿನೇಳನೆಯ ಅಧ್ಯಾಯ ಮೀಸಲಾಗಿದೆ. ನಾನು ಪಾಪದಲ್ಲಿ ಮುಳುಗಿ ಸಹಾಯವಿಲ್ಲದೆ ದಿಕ್ಕು ಕಾಣದೆ ಬಳಲುತ್ತಿ ದ್ದೇನೆ, ನಿನ್ನನ್ನು ಬಿಟ್ಟರೆ ನನಗೆ ಬೇರೆ ಗತಿಯಿಲ್ಲ ಎಂದು ಪ್ರಾರ್ಥಿ ಸುವುದೇ ಶರಣಾಗತಿ. (ಅಹಂ ಅಸ್ಮಿ ಅಪರಾಧಾನಾಂ ಆಲಯೋಽ ಕಿಂಚನಾಗತಿಃ। ತ್ವಮ್ ಏವೋಪಾಯಭೂತೋ ಮೇ ಭವೇತಿ ಪ್ರಾರ್ಥನಾಮತಿಃ ॥ ಶರಣಾಗತಿರ್ ಇತ್ಯುಕ್ತಾ ಸಾ ದೇವೇಽಸ್ಮಿನ್ ಪ್ರಯುಜ್ಯತಾಂ। ಅಹಿ. xxvii. 33, 31) ಈ ಶರಣಾಗತಿ ಭಾವ ತಳೆದವನು ಏನೂ ಮಾಡಬೇಕಾದ್ದಿಲ್ಲ. ಭಗವಂತನೇ ಎಲ್ಲ

ವನ್ನೂ ನೋಡಿಕೊಳ್ಳುತ್ತಾನೆ. ತಪಸ್, ಯಜ್ಞಗಳು, ತೀರ್ಥ ಯಾತ್ರೆಗಳು, ದಾನ ಈ ಯಾವುದೊಂದನ್ನೂ ಅನುಸರಿಸದೆ, ಶರಣಾಗತಿಯಿಂದ ಶ್ರೇಷ್ಠಗತಿಯನ್ನು ಪಡೆಯಬಹುದು. ಇದು ಉಪಾಯ ಕಾರ್ಯವಲ್ಲ, ಮಾನಸಿಕ ಭಾವ. ಇದು ಸುಲಭ ಮಾರ್ಗ. ಈ ದೋಣಿಯಲ್ಲಿ ಪ್ರಪನ್ನನು ಕುಳಿತುಕೊಳ್ಳುವುದೇ ಅವನು ಮಾಡಬೇಕಾದ ಕೆಲಸ. ಉಳಿದದ್ದು ದೋಣಿ ನಡಸುವವನ ಕರ್ತವ್ಯ. (ಅತ್ರ ನಾವೀತಿ ದೃಷ್ಟಾನ್ತಾತ್ ಉಪಾಯಜ್ಞಾನಂ ಏವ ತು। ನರೇಣ ಕೃತ್ಯಂ ಅನ್ಯತ್ ತು ನಾವಿಕಸ್ಯೇವ ತದ್ಧರೇಃ॥ ಅಹಿ. xxvii, 35)

ಪಂಚರಾತ್ರಕ್ಕೆ ವೇದ ಮತ್ತು ತಂತ್ರಗಳು ಆಧಾರ. ವೇದತಂತ್ರ-ಮಯೋದ್ಭೂತನಾನಾಪ್ರಸವಶಾಲಿನೀ (ಅಹಿ. vi. 9) ಈ ವಿಶ್ವದ ಎಲ್ಲವೂ, ಎಲ್ಲ ಶಕ್ತಿಗಳೂ ವ್ಯಾಪಾರಗಳೂ ಸುದರ್ಶನನ ವಿಭವ; ಜೀವರುಗಳ ಧರ್ಮಾರ್ಥಕಾಮಗಳೂ ಬಂಧನವೂ ಮೋಕ್ಷವೂ ಅವನಿಗೆ ಒಳಪಟ್ಟವು. (ಸುದರ್ಶನಾಹ್ವಯಾ ದೇವೀ ಸರ್ವಕೃತ್ಯ-ಕರೀ ವಿಭೋಃ। ತನ್ಮಯಂ ವಿದ್ಧಿ ಸಾಮರ್ಥ್ಯಂ ಸರ್ವಂ ಸರ್ವ-ಪದಾರ್ಥಜಂ॥ ಧರ್ಮಸ್ಯಾರ್ಥಸ್ಯ ಕಾಮಸ್ಯ ಮುಕ್ತೇರ್ ಬಂಧ-ತ್ರಯಸ್ಯ ಚ। ಯದ್ ಯತ್ ಸ್ವಕಾರ್ಯಸಾಮರ್ಥ್ಯಂ ತತ್ ತತ್ ಸುದರ್ಶನಂ ವಪುಃ॥ ಅಹಿ. xvi 4. ಮತ್ತು 6) ಸಾತ್ವತ ಮಂತ್ರಗಳು ಕೂಡ ವಿಷ್ಣು ಚೇತನದ ಶಕ್ತಿರೂಪಗಳೇ. ಸಾಕ್ಷಾತ್ ವಿಷ್ಣೋಃ ಕ್ರಿಯಾಶಕ್ತಿಃ ಶುದ್ಧಸಂವಿನ್ಮಯೀ ಪರಾ. ಅಹಿ. (vi. 10). ಶಕ್ತಿಯ ಈ ಮೊದಲ ಪರಿಣಾಮ 'ನಾದ' ಎರಡನೆಯದು 'ಬಿಂದು'. ಅದು ನಾಮ ಮತ್ತು ವಸ್ತುವಿನ ಐಕ್ಯ ರೂಪ. ಮೂರನೆಯದು ಶಬ್ದಬ್ರಹ್ಮ. ಬಿಂದುವಿನಿಂದ ವಿಷ್ಣುವಿನ ಶಕ್ತಿ

ಕುಂಡಲಿನಿಯ ನರ್ತನದಿಂದ ಹದಿನಾಲ್ಕು ಸ್ವರಗಳು ಉನ್ಮೇಷವಾಗುತ್ತವೆ. ಈ ಶಕ್ತಿ ಮೊದಲು ಮೂಲಾಧಾರದಲ್ಲಿ ಕಾಣಿಸಿಕೊಂಡು ನಾಭಿಯನ್ನು ಮುಟ್ಟಿದಾಗ ಅದಕ್ಕೆ ಪಶ್ಯಂತೀ ಎಂದು ಹೆಸರು. ಅಲ್ಲಿಂದ ಅದು ಹೃದಯಕಮಲವನ್ನು ಮುಟ್ಟಿ ಗಂಟಲಿನ ಮೂಲಕ ಹಾಯ್ದು ಹೋದಾಗ ಶಬ್ದರೂಪ ತಾಳುತ್ತದೆ. ಇಲ್ಲಿ ಹುಟ್ಟಿದ ಹದಿನಾಲ್ಕು ಸ್ವರಗಳ ವಿವಿಧ ಸಂಯೋಜನೆಯಿಂದ 'ಚಕ್ರ'ಗಳು ಹುಟ್ಟುತ್ತವೆ. ಒಂದೊಂದು ಚಕ್ರವೂ ಒಂದೊಂದು ದೇವತಾ ವಿಶೇಷ ಸೂಚಕ. ಈ ಚಕ್ರಗಳಿಗೆ ಸಮಾನಾಂತರವಾದ ಮಂತ್ರಗಳನ್ನೂ ಮಂತ್ರಗಳ ಧ್ಯಾನವಿಧಾನವನ್ನೂ ಪಂಚರಾತ್ರ ಸಾಹಿತ್ಯ ವಿಸ್ತಾರವಾಗಿ ವರ್ಣಿಸುತ್ತದೆ.

ತಂತ್ರಶಾಸ್ತ್ರಕ್ಕೆ ಅನುಸಾರವಾಗಿ ಅಹಿರ್‌ಬುಧ್ನ್ಯ ಸಂಹಿತೆ ಶರೀರದ ನರಗಳ ವ್ಯವಸ್ಥೆಯನ್ನು ವರ್ಣಿಸುತ್ತದೆ. ಶರೀರದ ನಾಡಿಗಳು 72000. ಇವುಗಳಲ್ಲಿ ಇಡಾ, ಪಿಂಗಲಾ ಸುಷುಮ್ನಾ ಮುಖ್ಯವಾದುವು. ಸುಷುಮ್ನಾದ ಸುತ್ತ ಕುಹು, ವರುಣ, ಯಶಿಸ್ವಿನೀ, ಪಿಂಗಳಾ, ಪೂಸಾ, ಪಯಸ್ವಿನೀ, ಸರಸ್ವತೀ, ಶಂಕಿನೀ, ಗಾಂಧಾರೀ, ಇಡಾ, ಹಸ್ತಿಜಹ್ವಾ, ವಿಶ್ವೋದರಾ ಎಂಬ ಹನ್ನೆರಡು ನಾಡಿಗಳಿವೆ.

ಶರೀರದಲ್ಲಿ ಹತ್ತು ವಾಯುಗಳಿವೆ. ಅವು ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ, ನಾಗ, ಕೂರ್ಮ, ಕ್ರಕರ, ದೇವದತ್ತ ಮತ್ತು ಧನಂಜಯ. ಪ್ರಾಣವಾಯ ನಾಭಿ ಚಕ್ರದಲ್ಲಿದೆ. ಅಪಾನ ಜೀರಕದ ಮತ್ತು ಜನನಾಂಗಳಕ್ಷೇತ್ರದಲ್ಲಿದೆ. ವ್ಯಾನ ಕಣ್ಣು ಕಿವಿಗಳ ಮಧ್ಯೆ ಇದೆ. ಉದಾನ ಕೈಗಳಲ್ಲಿದೆ. ಸಮಾನ ಶರೀರ ಆದ್ಯಂತ ಆವರಿಸಿದೆ. ಅಹಿರ್‌ಬುಧ್ನೀಯದ ಈ ವರ್ಣನೆಗೂ ಆಯುರ್ವೇದ ಮತ್ತು ಶಾಕ್ತತಂತ್ರಗಳ ವರ್ಣನೆಗೂ ವ್ಯತ್ಯಾಸಗಳಿವೆ.

ಅಹಿರ್‌ಬುಧ್ನ್ಯ ಪ್ರಾಣಾಯಾಮದ ಮೂಲಕ ನಾಡಿಗಳನ್ನು ಶುದ್ಧಿಗೊಳಿಸುವ ವಿಧಾನಗಳನ್ನೂ ಸಮಾಧಿಯ ಸ್ವರೂಪವನ್ನು ವಿಸ್ತಾರವಾಗಿ ವರ್ಣಿಸಿದೆ. ಪ್ರಾಣಾಯಾಮವನ್ನು ಕೈಕೊಳ್ಳುವ ಮುಂಚೆ ಚಕ್ರ, ಪದ್ಮ, ಕೂರ್ಮ, ಕುಕ್ಕುಟ, ಮಯೂರ, ವೀರ, ಸ್ವಸ್ತಿಕ, ಭದ್ರ, ಸಿಂಹ, ಮುಕ್ತ, ಗೋಮುಖಗಳೆಂಬ ಆಸನಗಳನ್ನು ಅಭ್ಯಾಸಿಸಬೇಕು.

ಅಹಿರ್‌ಬುಧ್ನ್ಯ ಎರಡು ಬಗೆಯಾದ ಉಪಾಸನೆಗಳನ್ನು ತಿಳಿಸುತ್ತದೆ. ಮೊದಲನೆಯದು ಮಂತ್ರಯೋಗ ಮತ್ತು ಧ್ಯಾನಯೋಗ. ಇದು ಆತ್ಮಸಮರ್ಪಣ ಮಂತ್ರಯೋಗವನ್ನು ಅನೇಕ ಅಧ್ಯಾಯಗಳಲ್ಲಿ ವಿಸ್ತಾರವಾಗಿ ವರ್ಣಿಸಿರುತ್ತದೆ. ಧ್ಯಾನಯೋಗವನ್ನು ಒಂದು ಅಧ್ಯಾಯದಲ್ಲಿ ಮಾತ್ರ ವರ್ಣಿಸಿರುತ್ತದೆ.

ಇದು ವರ್ಣಿಸುವ ಅಷ್ಟಾಂಗಯೋಗವೂ ಪತಂಜಲಯೋಗದಿಂದ ಭಿನ್ನವಾಗಿದೆ. ಯಮವೆಂದರೆ ಸತ್ಯ, ದಯೆ, ಧೃತಿ, ಶೌಚ, ಬ್ರಹ್ಮಚರ್ಯ, ಕ್ಷಮಾ, ಆರ್ಜವ, ಮಿತಾಹಾರ, ಅಸ್ತೇಯ ಮತ್ತು ಅಹಿಂಸಾ ಎಂಬ ವ್ರತಗಳ ಆಚರಣೆ. ನಿಯಮ ಎಂದರೆ ಪಂಚರಾತ್ರ ಸಿದ್ಧಾಂತ ಶ್ರವಣ, ದಾನ, ಮತಿ, ವಿಷ್ಣುಭಕ್ತಿ, ಸಂತೃಪ್ತಿ, ತಪ, ಆಸ್ತಿಕ್ಯ, ಹ್ರೀ, ವ್ರತ.

ಮಂತ್ರಯೋಗ ಮತ್ತು ಧ್ಯಾನಯೋಗಗಳ ಗುರಿ ಒಂದೇ. ಅದು ಅದ್ವೈತದ ಐಕ್ಯ ಮುಕ್ತಿಯಲ್ಲ; ಸಾಲೋಕ್ಯ ಮುಕ್ತಿ. ಅದನ್ನು ಅಹಿರ್‌ಬುಧ್ನ್ಯ ಭಗವತ್ತಾಮಯಿ ಮುಕ್ತಿ 'ಯೆಂದು' ವೈಷ್ಣವನ್ ತಮ್ ವಿಶೇತ್ ಪದಂ' ಎಂದು ಕರೆದಿರುತ್ತದೆ. (xi.x.3.4.41.)

---

# ಸಾಹಿತ್ಯವಾಹಿನಿ



---

ಡಿ. ವಿ. ಕೆ. ಮೂರ್ತಿ : ಪ್ರಕಾಶಕರು : ಮೈಸೂರು-೪

# ತಿದ್ದುಪಡಿ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೯ | ೧೯ | ಪರ್ದತದ | ಪರ್ವತದ |
| ೧೧ | ೨೦ | ದ್ವೈತಾ | ದ್ವೈತಾ- |
| ೧೫ | ೨-೩ | ಅಪರೂಪ | ಅಪರರೂಪ |
| ೧೯ | ೮ | ಸ್ವರೂಪೇಸ್ನೈವ | ಸ್ವರೂಪೇಣೈವ |
| ೧೯ | ೨೦ | ಠೂಪ | ರೂಪ |
| ೨೫ | ೧೬ | ಪಜ್ಞಾ | ಪ್ರಜ್ಞಾ |
| ೨೮ | ೨೦ | ಭವೆತೀ | ಭವೇತಿ |
| ೩೧ | ೧೪ | ಅಸ್ತೀಯ | ಅಸ್ತೇಯ |

# ಸಾಹಿತ್ಯವಾಹಿನಿ

## ಭಾರತೀಯ ತತ್ತ್ವಶಾಸ್ತ್ರದ ವಿವರಣಾತ್ಮಕ ಪರಿಚಯ

ಲೇಖಕರು : ಜಿ. ಹನುಮಂತರಾವ್

೪೧. ವೇದ ಸಂಹಿತೆಗಳು ೧
೪೨. ವೇದ ಸಂಹಿತೆಗಳು ೨
೪೩. ವೇದ ಸಂಹಿತೆಗಳು ೩
೪೪. ಬ್ರಾಹ್ಮಣಗಳು, ಆರಣ್ಯಕಗಳು
೪೫. ಉಪನಿಷತ್ತುಗಳ ತತ್ತ್ವ ೧
೪೬. ಉಪನಿಷತ್ತುಗಳ ತತ್ತ್ವ ೨
೪೭. ಉಪನಿಷತ್ತುಗಳ ತತ್ತ್ವ ೩
೪೮. ಕಲ್ಪಸೂತ್ರಗಳು ಇತ್ಯಾದಿ
೪೯. ಪಂಚರಾತ್ರ ಆಗಮಗಳು
೫೦. ಪಾಶುಪತ ಆಗಮಗಳು
೫೧. ಭಗವದ್ಗೀತೆ ೧
೫೨. ಭಗವದ್ಗೀತೆ ೨
೫೩. ಭಗವದ್ಗೀತೆ ೩
೫೪. ಚಾರ್ವಾಕ ಇತ್ಯಾದಿ
೫೫. ಹೀನಯಾನ ಬೌದ್ಧ ದರ್ಶನಗಳು
೫೬. ಮಹಾಯಾನ ಬೌದ್ಧ ದರ್ಶನಗಳು
೫೭. ಜೈನದರ್ಶನ
೫೮. ನ್ಯಾಯದರ್ಶನ
೫೯. ವೈಶೇಷಿಕ ದರ್ಶನ
೬೦. ಸಾಂಖ್ಯದರ್ಶನ
೬೧. ಯೋಗದರ್ಶನ
೬೨. ಪೂರ್ವ ಮೀಮಾಂಸಾ
೬೩. ವೇದಾಂತ ಸೂತ್ರಗಳು
೬೪. ಅದ್ವೈತ
೬೫. ವಿಶಿಷ್ಟಾದ್ವೈತ
೬೬. ದ್ವೈತ
೬೭. ಕಾಶ್ಮೀರಶೈವ ದರ್ಶನ
೬೮. ಭಾರತೀಯ ತತ್ತ್ವಶಾಸ್ತ್ರ ಸಮೀಕ್ಷೆ: ಅಂದು–ಇಂದು

ಪ್ರತಿಯೊಂದು ಪುಸ್ತಕದ ಬೆಲೆಯೂ ಐವತ್ತು ಪೈಸೆ

ಡಿ. ವಿ. ಕೆ. ಮೂರ್ತಿ :: ಪ್ರಕಾಶಕರು :: ಮೈಸೂರು-೪